| ಇ) | ಸರ್ವೆ ಕಾರ್ಯ ಮಾಡಲು ಎಷ್ಟು ಸಮಯ ಬೇಕಾಗುತ್ತದೆ? (ಸಂಪೂರ್ಣ ವಿವರ ನೀಡುವುದು) | ಪೋಡಿಗಾಗಿ ಸಲ್ಲಿಕೆಯಾದ ಅರ್ಜಿಗಳಲ್ಲಿ ಸರ್ವೆ ದಾಖಲೆ ಮತ್ತು ಪಹಣಿಗಳಲ್ಲಿ ಯಾವುದೇ ನ್ಯೂನ್ಯತೆ ಇಲ್ಲವಾದಲ್ಲಿ ಇಂತಹ ಪ್ರಕರಣಗಳನ್ನು 30 ದಿನಗಳ ಒಳಗಾಗಿ ಇತ್ಯರ್ಥಪಡಿಸುವಂತೆ ಸೂಚನೆಯನ್ನು ನೀಡಲಾಗಿದೆ ಮತ್ತು ಈ ಮೊದಲು ಭೂಮಾಪಕರುಗಳು ತಾಲ್ಲೂಕು ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಪ್ರತಿ ಮಾಹೆ ತಾಲ್ಲೂಕಿನಾದ್ಯಂತ 15 ರಿಂದ 20 ವಿವಿಧ ಗ್ರಾಮಗಳಿಗೆ ಅಳತೆಗೆ ಹೋಗುತ್ತಿದ್ದ ಕಾರಣ ಪ್ರಗತಿ ಕಡಿಮೆಯಾಗುತ್ತಿತ್ತು. ಈ ವ್ಯವಸ್ಥೆಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 55 ಭೂದಾಸೇ(1)2017 ದಿನಾಂಕ: 2-11-2017 ರನ್ವಯ ಭೂಮಾಪನ ವೃತ್ತಗಳನ್ನು ಸೃಜಿಸಲಾಗಿದೆ. ಇದರಿಂದ ಭೂಮಾಪಕರುಗಳಿಗೆ ಒಂದೇ ಕಡೆ ಗುಂಪಾಗಿರುವ 10 ರಿಂದ 12 ಗ್ರಾಮಗಳ ವ್ಯಾಪ್ತಿಯನ್ನು ನಿಗದಿಪಡಿಸಲಾಗಿದೆ.<br>ಪ್ರತಿ ಭೂಮಾಪಕರಿಗೆ ಮಾಹೆಯಾನ ಕನಿಷ್ಠ ನಿಗದಿತ ಗುರಿ 23 ಕಡತಗಳು ಇರುವುದನ್ನು ಕನಿಷ್ಠ 30 ಕಡತಗಳಿಗೆ ಬದಲಾಯಿಸಲಾಗಿದೆ. ಇದರಿಂದ ಹೆಚ್ಚಿನ ಪ್ರಗತಿ ಸಾಧಿಸಲು ಸಾಧ್ಯವಾಗುವುದು.<br>1000 ಅರ್ಹ ಅಭ್ಯರ್ಥಿಗಳಿಗೆ ಪರವಾನಗಿ ನೀಡುವ ಪ್ರಕ್ರಿಯೆ ನಡೆಸಿದ್ದು, ಈ ಪೈಕಿ 740 ಅರ್ಹ ಅಭ್ಯರ್ಥಿಗಳಿಗೆ ತರಬೇತಿ ನೀಡಿ, ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರ ಪರವಾನಗಿ ನೀಡಿ, ತಾಲ್ಲೂಕುಗಳಿಗೆ ನಿಯೋಜನೆ ಮಾಡಲಾಗಿರುತ್ತದೆ.<br>ರಾಜ್ಯದಲ್ಲಿ ಖಾಲಿ ಇರುವ ಭೂಮಾಪಕರ ಹುದ್ದೆಗಳ ಪೈಕಿ 1067 ಹುದ್ದೆಗಳನ್ನು ಭರ್ತಿ ಮಾಡಿಕೊಂಡು ತರಬೇತಿಯನ್ನು ನೀಡಲು ಪ್ರಾರಂಭಿಸ ಲಾಗಿದ್ದು, ತರಬೇತಿ ಮುಗಿದ ನಂತರ ಸದರಿ ಭೂಮಾಪಕರುಗಳನ್ನು ತಾಲ್ಲೂಕುಗಳಿಗೆ ನೇಮಕ ಮಾಡಿ ಅಳತೆ ಪ್ರಕರಣಗಳನ್ನು ತ್ವರಿತಗತಿಯಲ್ಲಿ ವಿಲೇವಾರಿ ಮಾಡಲು ಕ್ರಮ ಕೈಗೊಳ್ಳಲಾಗುವುದು. |
|---|---|---|

ಕಂಇ 97 ಭೂದಾಸ 2018

**ಆರ್.ವಿ.ದೇಶಪಾಂಡೆ**
ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು

ಅನುಬಂಧ

ರಾಜ್ಯಾದಂತ ಸರ್ವೆ ಮಾಡಲು ಮೊಜಣಿ ತಂತ್ರಾಂಶದಲ್ಲಿ ಸ್ವಿಕೃತವಾಗಿ ಅರ್ಜಿಗಳ ಪ್ರಗತಿ ವಿವರ
ಮಾಹೆ ( ಜೂನ್-2018)

| ಜಿಲ್ಲೆ | ಪ್ರಾರಂಬಿಕ. .ಶೀಲ್ಕು | ಮಾಹೆಯಲ್ಲಿ ಸ್ವೀಕೃತಿ | ಒಟ್ಟು | ಮಾಹೆಯಲ್ಲಿ ವಿಲೇ | ಬಾಕಿ |
|---|---|---|---|---|---|
| ಬೆಳಗಾವ | 35342 | 5028 | 40370 | 4472 | 35898 |
| ಬಾಗಲಕೋಟೆ | 13727 | 2347 | 16074 | 1769 | 14305 |
| ಬಿಜಾಪುರ | 30615 | 2257 | 32872 | 2192 | 30680 |
| ಗುಲ್ಬರ್ಗ | 23736 | 2592 | 26328 | 2425 | 23903 |
| ಬೀದರ್ | 13511 | 1866 | 15377 | 1710 | 13667 |
| ರಾಯಚೂರು | 21332 | 3313 | 24645 | 2254 | 22391 |
| ಕೊಪ್ಪಳ | 11361 | 1551 | 12912 | 1575 | 11337 |
| ಗದಗ | 9241 | 1843 | 11084 | 1347 | 9737 |
| ಧಾರವಾಡ | 11918 | 1973 | 13891 | 1530 | 12361 |
| ಉತ್ತರಕನ್ನಡ | 7416 | 1582 | 8998 | 1653 | 7345 |
| ಹಾವೇರಿ | 18819 | 1862 | 20681 | 2043 | 18638 |
| ಬಳ್ಳಾರಿ | 13564 | 2909 | 16473 | 2281 | 14192 |
| ಚಿತ್ರದುರ್ಗ | 15699 | 2131 | 17830 | 1654 | 16176 |
| ದಾವಣಗೆರೆ | 31322 | 2234 | 33556 | 2370 | 31186 |
| ಶಿವಮೊಗ್ಗ | 13970 | 1753 | 15723 | 1631 | 14092 |
| ಉಡುಪಿ | 11227 | 2838 | 14065 | 2483 | 11582 |
| ಚಿಕ್ಕಮಗಳೂರು | 14056 | 1643 | 15699 | 1678 | 14021 |
| ತುಮಕೂರು | 24315 | 5802 | 30117 | 4078 | 26039 |
| ಕೋಲಾರ | 14878 | 1967 | 16845 | 1409 | 15436 |
| ಬೆಂಗಳೂರು ಜಿಲ್ಲೆ | 22326 | 1994 | 24320 | 1623 | 22697 |
| ಬೆಂಗಳೂರು ಗ್ರಾಮಾಂತರ | 18584 | 3024 | 21608 | 1983 | 19625 |
| ಮಂಡ್ಯ | 17188 | 4438 | 21626 | 3755 | 17871 |
| ಹಾಸನ | 19350 | 5166 | 24516 | 3923 | 20593 |
| ದಕ್ಷಿಣ ಕನ್ನಡ | 8782 | 1783 | 10565 | 1508 | 9057 |
| ಕೊಡಗು | 2486 | 762 | 3248 | 1009 | 2239 |
| ಮೈಸೂರು | 18032 | 3000 | 21032 | 3037 | 17995 |
| ಚಾಮರಾಜನಗರ | 8480 | 1557 | 10037 | 1462 | 8575 |
| ಚಿಕ್ಕಬಳ್ಳಾಪುರ | 8206 | 2179 | 10385 | 1904 | 8481 |
| ರಾಮನಗರ | 19739 | 3185 | 22924 | 2285 | 20639 |
| ಯಾದಗಿರ್ | 12026 | 1564 | 13590 | 1135 | 12455 |
| **Total** | **491248** | **76143** | **567391** | **64178** | **503213** |

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 508

ಸದಸ್ಯರ ಹೆಸರು : ಶ್ರೀ ಅರಬೈಲ್ ಶಿವರಾಮ್ ಹೆಬ್ಬಾರ್ (ಯಲ್ಲಾಪುರ)

ಉತ್ತರಿಸುವ ದಿನಾಂಕ : 09-07-2018

ಉತ್ತರಿಸುವ ಸಚಿವರು : ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಟಿಬೆಟಿಯನ್ ನಿರಾಶ್ರಿತರಿಗೆ ನೀಡಿರುವ ಜಮೀನು ಎಷ್ಟು; | ರಾಜ್ಯದಲ್ಲಿ ಟಿಬೆಟಿಯನ್ ನಿರಾಶ್ರಿತರಿಗೆ ಒಟ್ಟು 15177.21 ಎಕರೆ ಜಮೀನನ್ನು ನೀಡಲಾಗಿದೆ. |
| ಆ) | ಈ ಟಿಬೆಟಿಯನ್ ನಿರಾಶ್ರಿತರಿಗೆ ಯಾವ ನಿಬಂಧನೆಗಳ ಆಧಾರದ ಮೇಲೆ ಜಮೀನನ್ನು ನೀಡಲಾಗಿದೆ; | ಟಿಬೆಟಿಯನ್ ನಿರಾಶ್ರಿತರಿಗೆ ಕೇವಲ ಕೃಷಿ ಮಾಡುವ ಉದ್ದೇಶಕ್ಕಾಗಿ ಪ್ರತಿ ಎಕರೆಗೆ ಪ್ರತಿ ವರ್ಷಕ್ಕೆ ರೂ. 100.00 ರಂತೆ ಗುತ್ತಿಗೆ ಆಧಾರದ ಮೇಲೆ ಜಮೀನನ್ನು ನೀಡಲಾಗಿದೆ. |
| ಇ) | ಟಿಬೆಟಿಯನ್ನು ಕಾಲನಿಗಳಲ್ಲಿ ಮನೆಗಳು ಮತ್ತು ಕಟ್ಟಡಗಳನ್ನು ನಿರ್ಮಾಣ ಮಾಡಲು ಇವರುಗಳಿಗೆ ಸರ್ಕಾರದಿಂದ ನೀಡಿರುವ ವಿನಾಯಿತಿಗಳೇನು; | ಸರ್ಕಾರದಿಂದ ಯಾವುದೇ ವಿನಾಯಿತಿ ನೀಡಿರುವುದಿಲ್ಲ. |
| ಈ) | ಟಿಬೆಟಿಯನ್ ನಿರಾಶ್ರಿತರ ಕಾಲೋನಿಗಳಲ್ಲಿರುವ ದೂರವಾಣಿ, ವಿದ್ಯುತ್ ಬಿಲ್ಲುಗಳನ್ನು ತುಂಬುತ್ತಿದ್ದಾರೆಯೇ; | ಹೌದು |
| ಉ) | ಇವರುಗಳು ನಿರ್ಮಿಸಿರುವ ಮನೆ ಹಾಗೂ ಕಟ್ಟಡಗಳಿಗೆ ಕರವನ್ನು ವಿಧಿಸಲಾಗುತ್ತಿದೆಯೇ; ಹಾಗಿಲ್ಲದಿದ್ದಲ್ಲಿ ಇವರಿಂದ ಕರ ವಸೂಲಿ ಮಾಡಲು ಇರುವ ಅಡೆತಡೆಗಳೇನು; | ಇವರುಗಳು ನಿರ್ಮಿಸಿರುವ ಮನೆ ಹಾಗೂ ಕಟ್ಟಡಗಳಿಗೆ ಕರವನ್ನು ವಿಧಿಸಲಾಗುತ್ತಿಲ್ಲ. ವಸತಿ ಕಾಲೋನಿಗಳು ಗ್ರಾಮ ಪಂಚಾಯತ್ ವ್ಯಾಪ್ತಿಗೆ ಸೇರ್ಪಡೆಯಾಗಿರುವುದಿಲ್ಲ. |
| ಊ) | ಉತ್ತರ ಕನ್ನಡ ಜಿಲ್ಲೆಯಲ್ಲಿಯಲ್ಲಿರುವ ಟಿಬೆಟಿಯನ್ ನಿರಾಶ್ರಿತರ ಕಾಲೋನಿಗಳಲ್ಲಿನ ವಿಚಾರಕ್ಕೆ ಸಂಬಂಧಿಸಿದಂತೆ ಸಂಪೂರ್ಣ ವಿವರ ನೀಡುವುದು? | ಉತ್ತರ ಕನ್ನಡ ಜಿಲ್ಲೆಯ 9 ಗ್ರಾಮಗಳಲ್ಲಿ ಜಮೀನು ಗುತ್ತಿಗೆ ಆಧಾರದ ಮೇಲೆ ಕೆಲವೊಂದು ಷರತ್ತುಗಳಿಗೆ ಒಳಪಟ್ಟು ನೀಡಲಾಗಿರುತ್ತದೆ. 2011ರ ಜನಗಣತಿಯ ಪ್ರಕಾರ ಇವರ ಒಟ್ಟು ಜನ ಸಂಖ್ಯೆ: 12,925 ಆಗಿದ್ದು, ಇವರು ತಮ್ಮದೇ ಆದ ಆಸ್ಪತ್ರೆ ಹಾಗೂ ಶಾಲೆಗಳನ್ನು ತೆರೆದಿದ್ದು, ಧರ್ಮಭೋದನೆಗೆ ದೇವಾಲಯಗಳನ್ನು ನಿರ್ಮಿಸಲಾಗಿರುತ್ತದೆ. ಟಿಬೆಟಿಯನ್ ನಿರಾಶ್ರಿತರಿಗೆ ಕೃಷಿ ಮಾಡುವ ಉದ್ದೇಶಕ್ಕಾಗಿ 20 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಜಮೀನು ನೀಡಲಾಗಿದೆ. |

ಆರ್‌ಡಿ 17 ಎಲ್‌ಜಿಎನ್ 2018

ಆರ್.ವಿ.ದೇಶಪಾಂಡೆ

ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ,

ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 83 |
| ಸದಸ್ಯರ ಹೆಸರು | ಮಾನ್ಯ ಶ್ರೀ ಶ್ರೀಮಂತ್ ಬಾಳಾಸಾಹೇಬ್ ಪಾಟೀಲ್ |
| ಉತ್ತರಿಸುವ ದಿನಾಂಕ: | 09.07.2018 |
| ಉತ್ತರಿಸುವ ಸಚಿವರು: | ಮಾನ್ಯ ಗಣಿ ಮತ್ತು ಭೂವಿಜ್ಞಾನ ಹಾಗೂ ಮುಜರಾಯಿ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ | ಕಾಗವಾಡ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿನ ಸ್ಮಶಾನ ಭೂಮಿಗಳಿಗೆ ತಡೆಗೋಡೆ ಇಲ್ಲದಿರುವುದು ಹಾಗೂ ಮೃತ ಶರೀರವನ್ನು ಸುಡಲು ಶವಗಾರ ಇಲ್ಲದೇ ತೊಂದರೆಯುಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ | ಬಂದಿದ್ದಲ್ಲಿ, ಸದರಿ ಸಮಸ್ಯೆಗಳ ಪರಿಹಾರಕ್ಕೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; (ಸಂಪೂರ್ಣ ವಿವರ ನೀಡುವುದು) | ಮುಜರಾಯಿ ಇಲಾಖೆಯಿಂದ ರಾಜ್ಯದಲ್ಲಿರುವ ಹಿಂದೂ ರುದ್ರಭೂಮಿಗಳ ಅಭಿವೃದ್ಧಿ ಯೋಜನೆಯಡಿ ರುದ್ರಭೂಮಿಗಳ ಅಭಿವೃದ್ಧಿ/ ಆಧುನೀಕರಣಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದೆ.<br>ಬೆಳಗಾವಿ ಜಿಲ್ಲೆ, ಕಾಗವಾಡ ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೆ ಬರುವ ಈ ಕೆಳಕಂಡ ರುದ್ರಭೂಮಿಗಳ ಅಭಿವೃದ್ಧಿಗಾಗಿ ಒಟ್ಟು 11.40 ಲಕ್ಷಗಳ ಅನುದಾನವನ್ನು ಮಂಜೂರು ಮಾಡಲಾಗಿದೆ.<br>ರೂ.ಲಕ್ಷಗಳಲ್ಲಿ |

| ವರ್ಷ | ರುದ್ರಭೂಮಿ ವಿವರ | ಕಾಮಗಾರಿ | ಮೊತ್ತ |
|---|---|---|---|
| 2015-16 | ಅಥಣಿ ತಾ: ಕಾಗವಾಡ ಗ್ರಾಮ | ಸ್ಮಶಾನ ಭೂಮಿಯಲ್ಲಿ ಪೇವಿಂಗ್ ಬ್ಲಾಕ್ ಅಳವಡಿಸುವುದು | 10.00 |
| 2016-17 | ಅಥಣಿ ತಾ: ಕುಸನಾಳ ಗ್ರಾಮ | ಚಿತಗಾರ ನಿರ್ಮಾಣ | 1.40 |

(ರಾಜಶೇಖರ ಬಿ. ಪಾಟೀಲ)

# ಕರ್ನಾಟಕ ವಿಧಾನಸಭೆ

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 87 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀಮತಿ ಜೊಲ್ಲೆ ಶಶಿಕಲಾ ಅಣ್ಣಾ ಸಾಹೇಬ್ (ನಿಪ್ಪಾಣಿ) |
| 3) | ಉತ್ತರಿಸಬೇಕಾದ ದಿನಾಂಕ | 09/07/2018 |
| 4) | ಉತ್ತರಿಸುವವರು | ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

*****

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆಯಲ್ಲಿ ಎಷ್ಟು ಐ.ಟಿ.ಐ. ಕಾಲೇಜುಗಳು ಇವೆ ಅವುಗಳಿಗೆ ಮಂಜೂರಾದ ಶಿಕ್ಷಕರ ಸಂಖ್ಯೆ ಎಷ್ಟು; ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರು ಎಷ್ಟು; ಕೊರತೆಯಿರುವ ಶಿಕ್ಷಕರು ಎಷ್ಟು; | ಬೆಳಗಾವಿ ಜಿಲ್ಲೆಯಲ್ಲಿ ಒಟ್ಟು 15 ಐ.ಟಿ.ಐ. ಕಾಲೇಜುಗಳಿವೆ. ಸದರಿ ಕಾಲೇಜುಗಳಿಗೆ ಮಂಜೂರಾದ, ಕಾರ್ಯನಿರ್ವಹಿಸುತ್ತಿರುವ ಮತ್ತು ಕೊರತೆಯಿರುವ ಶಿಕ್ಷಕರ ಮಾಹಿತಿಯು ಈ ಕೆಳಕಂಡಂತಿದೆ. (ಕೆಳಗಿನ ಕೋಷ್ಟಕ) |

| ಜಿಲ್ಲೆ & ತಾಲ್ಲೂಕ್ | ಕ್ರ ಸಂ | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ | ಕಿರಿಯ ತರಬೇತಿ ಅಧಿಕಾರಿಗಳ ಮಂಜೂರಾದ ಹುದ್ದೆಗಳು | ಕಿರಿಯ ತರಬೇತಿ ಅಧಿಕಾರಿಗಳ ಭರ್ತಿಯಾದ ಹುದ್ದೆಗಳು | ಕಿರಿಯ ತರಬೇತಿ ಅಧಿಕಾರಿಗಳ ಖಾಲಿ ಇರುವ ಹುದ್ದೆಗಳು |
|---|---|---|---|---|---|
| ಬೆಳಗಾವಿ | 1 | ಬೆಳಗಾವಿ | 28 | 23 | 5 |
| ಬೆಳಗಾವಿ[ಮ] | 2 | ಬೆಳಗಾವಿ[ಮ | 9 | 8 | 1 |
| ಬೈಲಹೊಂಗಲ | 3 | ನೇಸರ್ಗಿ | 6 | 4 | 2 |
| ಚಿಕ್ಕೋಡಿ | 4 | ನಿಪ್ಪಾಣಿ | 6 | 6 | 0 |
| ರಾಮದುರ್ಗ | 5 | ರಾಮದುರ್ಗ | 9 | 8 | 1 |
| ಚಿಕ್ಕೋಡಿ | 6 | ಸದಲಗ | 11 | 5 | 6 |
| ಸವದತ್ತಿ | 7 | ಸವದತ್ತಿ | 8 | 4 | 4 |
| ಗೋಕಾಕ್ | 8 | ಗೋಕಾಕ್ | 19 | 12 | 7 |
| ಬೈಲಹೊಂಗಲ | 9 | ಕಿತ್ತೂರು | 19 | 10 | 9 |
| ಚಿಕ್ಕೋಡಿ | 10 | ಅಕ್ಕೋಳ | 5 | 0 | 5 |
| ಚಿಕ್ಕೋಡಿ | 11 | ಚಿಕ್ಕೋಡಿ | 5 | 0 | 5 |
| ಖಾನಾಪುರ | 12 | ಖಾನಾಪುರ | 5 | 0 | 5 |
| ಅಥಣಿ | 13 | ಅಥಣಿ | 5 | 0 | 5 |
| ಹುಕ್ಕೇರಿ | 14 | ಯಮಕನಮರಡಿ | 5 | 0 | 5 |
| ರಾಯಭಾಗ | 15 | ರಾಯಭಾಗ | **12** | **0** | **12** |
| | | ಒಟ್ಟು | **152** | **80** | **72** |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಜಿಲ್ಲೆಯಲ್ಲಿರುವ ಯಾವ ಯಾವ ಐ.ಟಿ.ಐ. ಕಾಲೇಜುಗಳ ಪ್ರಾಂಶುಪಾಲರು ಯಾವ ಯಾವ ಕಾಲೇಜುಗಳ ಪ್ರಭಾರಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ; | ಗೋಕಾಕ್ ಕೈಗಾರಿಕಾ ತರಬೇತಿ ಸಂಸ್ಥೆ, ಪ್ರಾಚಾರ್ಯರು ಅಕ್ಕೋಳ ಹಾಗೂ ಸದಲಗಾ ಸಂಸ್ಥೆ ಪ್ರಾಚಾರ್ಯರು ಚಿಕ್ಕೋಡಿ ಕೈಗಾರಿಕಾ ತರಬೇತಿ ಸಂಸ್ಥೆಯ ಪ್ರಭಾರೆ ಪ್ರಾಚಾರ್ಯರ ಕರ್ತವ್ಯಗಳನ್ನು ಹೆಚ್ಚುವರಿಯಾಗಿ ಕಾರ್ಯನಿರ್ವಹಿಸುತ್ತಿರುತ್ತಾರೆ. |

--2

| ಇ) | ಪ್ರಭಾರಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿರುವುದರಿಂದ ವಿದ್ಯಾರ್ಥಿಗಳು ಹಾಗೂ ಶಿಕ್ಷಕರುಗಳಿಗೆ ಶೈಕ್ಷಣಿಕವಾಗಿ ಹಾಗೂ ಆಡಳಿತಾತ್ಮಕವಾಗಿ ತೊಂದರೆಯನ್ನು ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ, ಹಾಗಿದ್ದಲ್ಲಿ ಇದಕ್ಕೆ ಪರ್ಯಾಯವಾಗಿ ಯಾವ ನೀತಿಯನ್ನು ಅನುಸರಿಸಲಾಗುವುದು? | ಇಲಾಖೆಯಲ್ಲಿ ಅಧಿಕಾರಿಗಳ ತೀವ್ರ ಕೊರತೆ ಇರುವುದರಿಂದ 15 ಐಟಿಐ ಗಳ ಪೈಕಿ 2 ಐ.ಟಿ.ಐ. ಗಳಿಗೆ ಸಮೀಪವಿರುವ ಕೈಗಾರಿಕಾ ತರಬೇತಿ ಸಂಸ್ಥೆಗಳ ಪ್ರಾಚಾರ್ಯರುಗಳಿಗೆ ಹೆಚ್ಚುವರಿ ಪ್ರಭಾರೆ ವಹಿಸಿ ತರಬೇತಿ ಕಾರ್ಯಕ್ರಮವನ್ನು ಯಾವುದೇ ತೊಂದರೆಗಳಿಲ್ಲದಂತೆ ನಿರ್ವಹಿಸಲಾಗುತ್ತಿದೆ.<br><br>ಖಾಲಿ ಇರುವ ಉಳಿಕೆ ಮೂಲ ವೃಂದದ 32 ಮತ್ತು ಹೈದ್ರಾಬಾದ್-ಕರ್ನಾಟಕ ಸ್ಥಳೀಯ ವೃಂದದ 06 ಪ್ರಾಚಾರ್ಯರು ದರ್ಜೆ-2 ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ.<br><br>ಮುಂದುವರೆದು, ಮುಂಬಡ್ತಿಗೆ ಲಭ್ಯವಿರುವ ಖಾಲಿ ಹುದ್ದೆಗಳನ್ನು ಬಡ್ತಿ ಮೂಲಕ ಭರ್ತಿ ಮಾಡಲು ಕ್ರಮವಹಿಸಲಾಗುತ್ತಿದೆ. |
|---|---|---|

ಸಂಖ್ಯೆ: ಕೌಉಜೀಇ 41 ಕೈತಪ್ರ 2018

ಆರ್.ವಿ. ದೇಶಪಾಂಡೆ
ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :: 50
ಸದಸ್ಯರ ಹೆಸರು :: ಶ್ರೀ ಗೋವಿಂದ ಎಂ. ಕಾರಜೋಳ (ಮುಧೋಳ)
ಉತ್ತರಿಸುವ ದಿನಾಂಕ :: 09-07-2018
ಉತ್ತರಿಸುವ ಸಚಿವರು :: ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ಸ್ಮಶಾನ ಭೂಮಿ ಇಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಹಾಗಿದ್ದಲ್ಲಿ ಆ ಗ್ರಾಮಗಳು ಯಾವುವು | ಮುಧೋಳ ತಾಲ್ಲೂಕಿನ ಈ ಕೆಳಕಂಡ ಗ್ರಾಮಗಳಲ್ಲಿ ರುದ್ರಭೂಮಿ ಸೌಲಭ್ಯ ಇರುವುದಿಲ್ಲ:- 1) ಶಿರೋಳ 2) ಬುನ್ನ ಪಿ.ಎಮ್ 3) ಮುಗಳಖೋಡ 4) ಒಂಟಗೋಡಿ 5) ನಾಗರಾಳ 6) ಮಲ್ಲಾಪೂರ ಪಿ.ಜೆ 7) ಬುದ್ನಿ ಕೆ.ಡಿ 8) ಚಿಂಚಖಂಡಿ ಬಿ.ಕೆ |
| ಇ) | ಸ್ಮಶಾನ ಭೂಮಿ ಇಲ್ಲದೇ ಇರುವ ಗ್ರಾಮಗಳಿಗೆ ಭೂಮಿ ಒದಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | ಮುಧೋಳ ತಾಲ್ಲೂಕಿನ 4 ಗ್ರಾಮಗಳಲ್ಲಿ ಸರ್ಕಾರಿ ಜಮೀನು ಲಭ್ಯವಿದ್ದರೂ ರುದ್ರಭೂಮಿಗಾಗಿ ಕಾಯ್ದಿರಿಸಲು ಯೋಗ್ಯವಿರುವುದಿಲ್ಲ. ಹಾಗೂ ಇನ್ನುಳಿದ 4 ಗ್ರಾಮಗಳಲ್ಲಿ ಸರ್ಕಾರಿ ಜಮೀನು ಲಭ್ಯವಿರುವುದಿಲ್ಲ. ಆದ್ದರಿಂದ ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ 149 ಎಲ್‌ಜಿಪಿ 2014, ದಿನಾಂಕ:11-09-2014ರ ಪ್ರಕಾರ ಪ್ರತಿಯೊಂದು ಗ್ರಾಮದಲ್ಲೂ ಸರ್ಕಾರಿ ಜಮೀನನ್ನು ಗುರುತಿಸಿ ಸಾರ್ವಜನಿಕ ರುದ್ರಭೂಮಿಗಾಗಿ ಕಾಯ್ದಿರಿಸಲು ಹಾಗೂ ಸರ್ಕಾರಿ ಜಮೀನು ಲಭ್ಯವಿಲ್ಲದ ಗ್ರಾಮಗಳಲ್ಲಿ ಖಾಸಗಿ ಜಮೀನನ್ನು ಖರೀದಿಸಿ ಸಾರ್ವಜನಿಕ ಸ್ಮಶಾನಕ್ಕಾಗಿ ಕಾಯ್ದಿರಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ) | ಎಷ್ಟು ದಿನಗಳಲ್ಲಿ ಭೂಮಿ ಒದಗಿಸಲಾಗುವುದು? | ಸದರಿ ಗ್ರಾಮಗಳಿಗೆ ಖಾಸಗಿ ಜಮೀನು ಖರೀದಿಸಲು ಗ್ರಾಮ ಸಭೆಯಲ್ಲಿ ಚರ್ಚಿಸಿ, ಭೂ ಮಾಲಿಕರಿಂದ ಒಪ್ಪಿಗೆ ಪಡೆದು ಆದ್ಯತೆಯ ಮೇರೆಗೆ ಖಾಸಗಿ ಜಮೀನನ್ನು ಖರೀದಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಆರ್‌ಡಿ 26 ಎಲ್‌ಜಿಜೆ 2018

ಆರ್.ವಿ. ದೇಶಪಾಂಡೆ
ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **563**

ಸದಸ್ಯರ ಹೆಸರು : **ಶ್ರೀ ರಾಜೇಶ್ ನಾಯಕ್.ಯು. (ಬಂಟ್ವಾಳ)**

ಉತ್ತರಿಸುವ ದಿನಾಂಕ : **09.07.2018**

ಉತ್ತರಿಸುವ ಸಚಿವರು : **ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು**

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಭೂ ಪರಿವರ್ತನಾ ಕಾರ್ಯವು ಸ್ಥಗಿತಗೊಂಡು ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ಕರ್ನಾಟಕ ಭೂ ಕಂದಾಯ ಕಾಯ್ದೆಯ ಕಲಂ 95(2) ರಡಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪಟ್ಟಾ ಜಮೀನುಗಳ ಭೂ ಪರಿವರ್ತನೆಯನ್ನು ಮಾಡಲು ತಾಲ್ಲೂಕು ತಹಶೀಲ್ದಾರರು ಮತ್ತು ಕರ್ನಾಟಕ ಭೂ ಸುಧಾರಣಾ ಕಾಯ್ದೆಯಡಿ ಮಂಜೂರಾದ ಜಮೀನುಗಳ ಭೂ ಪರಿವರ್ತನೆಯನ್ನು ಮಾಡಲು ಜಿಲ್ಲಾಧಿಕಾರಿಗಳು ಅಧಿಕಾರವನ್ನು ಹೊಂದಿರುತ್ತಾರೆ.<br>ಸರ್ಕಾರಿ ಆದೇಶ ದಿನಾಂಕ 22.02.2018 ರಂತೆ ದಿನಾಂಕ 01.03.2018 ರಿಂದ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 95(2) ರನ್ವಯ ಕೃಷಿ ಭೂಮಿಯನ್ನು ಕೃಷಿಯೇತರ ಉದ್ದೇಶಕ್ಕಾಗಿ ಪರಿವರ್ತಿಸುವ ಕೋರಿಕೆಗಳನ್ನು ಭೂ ಪರಿವರ್ತನಾ ತಂತ್ರಾಂಶದ ಮುಖಾಂತರವೇ ನಿರ್ವಹಿಸಲು ಹಾಗೂ ಭೂ ಪರಿವರ್ತನೆ ಆದೇಶಗಳ ಮೇಲೆ ಕಡ್ಡಾಯವಾಗಿ ಜಿಲ್ಲಾಧಿಕಾರಿಯವರ ಡಿಜಿಟಲ್ ಸಹಿ ಮಾಡುವಂತೆ ಆದೇಶವನ್ನು ಹೊರಡಿಸಲಾಗಿದೆ. ಆದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಪಟ್ಟಾ ಜಮೀನುಗಳ ಭೂ ಪರಿವರ್ತನೆಯನ್ನು ತಹಶೀಲ್ದಾರ್‌ರವರ ಹಂತದಲ್ಲಿ ನಿರ್ವಹಿಸಲು ತಂತ್ರಾಂಶದಲ್ಲಿ ಅಧಿಕಾರ ನೀಡದ ಕಾರಣ ಭೂ ಪರಿವರ್ತನಾ ಅರ್ಜಿಗಳನ್ನು ತಂತ್ರಾಂಶದಲ್ಲಿ ಇತ್ಯರ್ಥಪಡಿಸಲು ಸಾಧ್ಯವಾಗಿರಲಿಲ್ಲ. |
| ಆ) | ಬಂದಿದ್ದಲ್ಲಿ, ಈ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ? (ಸಂಪೂರ್ಣ ವಿವರ ನೀಡುವುದು) | ಪ್ರಸ್ತುತ ಭೂಮಿ ಉಸ್ತುವಾರಿ ಕೋಶ, ಬೆಂಗಳೂರು ಇವರಿಂದ ಪಟ್ಟಾ ಜಮೀನುಗಳ ಭೂ ಪರಿವರ್ತನೆ ಪ್ರಕ್ರಿಯೆಯನ್ನು ತಹಶೀಲ್ದಾರ್‌ರವರ ಹಂತದಲ್ಲಿಯೇ ನಿರ್ವಹಿಸಲು ಪ್ರತ್ಯೇಕ ಆನ್‌ಲೈನ್ ತಂತ್ರಾಂಶವನ್ನು ರೂಪಿಸಿ, ಭೂ ಪರಿವರ್ತನೆಗೆ ಅವಕಾಶ ಕಲ್ಪಿಸಲಾಗಿದ್ದು, ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಭೂ ಪರಿವರ್ತನೆ ಪ್ರಕ್ರಿಯೆ ಕಾರ್ಯವು ಚಾಲ್ತಿಯಲ್ಲಿರುತ್ತದೆ. |

ಆರ್‌ಡಿ 47 ಎಲ್‌ಜಿಎ 2018

ಆರ್.ವಿ.ದೇಶಪಾಂಡೆ

ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 74
ಸದಸ್ಯರ ಹೆಸರು : ಶ್ರೀ ಸಿ.ಟಿ.ರವಿ (ಚಿಕ್ಕಮಗಳೂರು)
ಉತ್ತರಿಸುವ ದಿನಾಂಕ : 09.07.2018
ಉತ್ತರಿಸುವ ಸಚಿವರು : ಕಂದಾಯ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಮಗಳೂರು ಜಿಲ್ಲೆಯಲ್ಲಿ 94ಸಿ ಮತ್ತು 94ಸಿಸಿ ಯಲ್ಲಿ ಬಂದಿರುವ ಅರ್ಜಿಗಳೆಷ್ಟು; (ತಾಲ್ಲೂಕುವಾರು ವಿವರ ಒದಗಿಸುವುದು) | ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಲಂ 94ಸಿ ಮತ್ತು 94ಸಿಸಿ ಅಡಿ ತಾಲ್ಲೂಕುವಾರು ಸ್ವೀಕೃತವಾಗಿರುವ ಅರ್ಜಿಗಳ ವಿವರ ಈ ಕೆಳಕಂಡಂತಿವೆ:- |

| ಕ್ರಮ ಸಂಖ್ಯೆ | ತಾಲ್ಲೂಕುಗಳ ಹೆಸರು | ಸ್ವೀಕೃತಗೊಂಡಿರುವ ಅರ್ಜಿಗಳ ಸಂಖ್ಯೆ | |
|---|---|---|---|
| | | 94ಸಿ | 94ಸಿಸಿ |
| 1 | ಚಿಕ್ಕಮಗಳೂರು | 9027 | 762 |
| 2 | ಮೂಡಿಗೆರೆ | 9642 | 70 |
| 3 | ಶೃಂಗೇರಿ | 4906 | 22 |
| 4 | ಕೊಪ್ಪ | 7727 | 158 |
| 5 | ತರೀಕೆರೆ | 5365 | 104 |
| 6 | ಕಡೂರು | 538 | 118 |
| 7 | ನರಸಿಂಹರಾಜಪುರ | 10250 | 310 |
| | ಒಟ್ಟು | **47455** | **1544** |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಈ ಪೈಕಿ ಇತ್ಯರ್ಥಗೊಳಿಸಿ ಹಕ್ಕುಪತ್ರ ವಿತರಿಸಿರುವ ಪ್ರಕರಣಗಳೆಷ್ಟು; | ಸ್ವೀಕೃತಗೊಂಡಿರುವ ಅರ್ಜಿಗಳಲ್ಲಿ, ಮಂಜೂರಾದ, ಇತ್ಯರ್ಥಗೊಳಿಸಿ ಹಕ್ಕುಪತ್ರ ವಿತರಿಸಿರುವ ಮತ್ತು ಹಕ್ಕುಪತ್ರ ವಿತರಿಸಲು ಬಾಕಿ ಇರುವ ಪ್ರಕರಣಗಳ ಸಂಖ್ಯೆಯ ವಿವರ ಈ ಕೆಳಕಂಡಂತಿವೆ:- |

| ಕ್ರಮ ಸಂಖ್ಯೆ | ತಾಲ್ಲೂಕುಗಳ ಹೆಸರು | ಮಂಜೂರಾದ ಪ್ರಕರಣಗಳ ಸಂಖ್ಯೆ | | ಹಕ್ಕುಪತ್ರ ವಿತರಿಸಿರುವ ಪ್ರಕರಣಗಳ ಸಂಖ್ಯೆ | | ಹಕ್ಕುಪತ್ರ ವಿತರಿಸಲು ಬಾಕಿ ಇರುವ ಪ್ರಕರಣಗಳ ಸಂಖ್ಯೆ | |
|---|---|---|---|---|---|---|---|
| | | 94ಸಿ | 94ಸಿಸಿ | 94ಸಿ | 94ಸಿಸಿ | 94ಸಿ | 94ಸಿಸಿ |
| 1 | ಚಿಕ್ಕಮಗಳೂರು | 5277 | 2 | 2200 | 0 | 3077 | 2 |
| 2 | ಮೂಡಿಗೆರೆ | 1513 | 12 | 810 | 5 | 703 | 7 |
| 3 | ಶೃಂಗೇರಿ | 58 | 0 | 58 | 0 | 0 | 0 |
| 4 | ಕೊಪ್ಪ | 351 | 0 | 230 | 0 | 121 | 0 |
| 5 | ತರೀಕೆರೆ | 1694 | 1 | 1694 | 1 | 0 | 0 |
| 6 | ಕಡೂರು | 110 | 46 | 30 | 39 | 80 | 7 |
| 7 | ನರಸಿಂಹರಾಜಪುರ | 863 | 0 | 773 | 0 | 90 | 0 |
| | ಒಟ್ಟು | **9866** | **61** | **5795** | **45** | **4071** | 16 |

....................2

ಇ) ತಿರಸ್ಕೃತವಾಗಿರುವ ಪ್ರಕರಣಗಳೆಷ್ಟು; ತಿರಸ್ಕೃತಗೊಳ್ಳಲು ಕಾರಣಗಳೇನು;

ತಾಲ್ಲೂಕುವಾರು ತಿರಸ್ಕೃತವಾಗಿರುವ ಪ್ರಕರಣಗಳ ಸಂಖ್ಯೆ ಈ ಕೆಳಕಂಡಂತಿವೆ:-

| ಕ್ರಮ ಸಂಖ್ಯೆ | ತಾಲ್ಲೂಕುಗಳ ಹೆಸರು | ತಿರಸ್ಕೃತವಾಗಿರುವ ಪ್ರಕರಣಗಳ ಸಂಖ್ಯೆ | |
|---|---|---|---|
| | | **94ಸಿ** | **94ಸಿಸಿ** |
| 1 | ಚಿಕ್ಕಮಗಳೂರು | 1721 | 152 |
| 2 | ಮೂಡಿಗೆರೆ | 546 | 0 |
| 3 | ಶೃಂಗೇರಿ | 3 | 0 |
| 4 | ಕೊಪ್ಪ | 254 | 0 |
| 5 | ತರೀಕೆರೆ | 3270 | 82 |
| 6 | ಕಡೂರು | 177 | 65 |
| 7 | ನರಸಿಂಹರಾಜಪುರ | 5174 | 310 |
| | **ಒಟ್ಟು** | **11145** | **609** |

ಸರ್ಕಾರಿ ಜಮೀನಿನಲ್ಲಿ ಮನೆ ನಿರ್ಮಿಸಿರುವುದಿಲ್ಲ, ಸ್ವಂತ ಹಿಡುವಳಿ ಜಮೀನಿನಲ್ಲಿ ಮನೆ ನಿರ್ಮಿಸಿರುತ್ತಾರೆ, ಈಗಾಗಲೇ ಹಕ್ಕುಪತ್ರ ಪಡೆದಿರುವ ಫಲಾನುಭವಿಗಳೇ ಮತ್ತೊಮ್ಮೆ ಅರ್ಜಿ ಸಲ್ಲಿಸಿರುವ ಕಾರಣಗಳಿಂದ ಅಂತಹ ಅರ್ಜಿಗಳು ತಿರಸ್ಕೃತಗೊಂಡಿರುತ್ತವೆ.

ಈ) ಬಾಕಿ ಇರುವ ಅರ್ಜಿಗಳೆಷ್ಟು; ಬಾಕಿ ಇರುವ ಅರ್ಜಿಗಳನ್ನು ಯಾವಾಗ ಇತ್ಯರ್ಥಪಡಿಸಿ, ಹಕ್ಕುಪತ್ರ ವಿತರಿಸಲಾಗುವುದು? (ವಿವರ ನೀಡುವುದು)

ಬಾಕಿ ಇರುವ ಅರ್ಜಿಗಳ ವಿವರಗಳು ಈ ಕೆಳಕಂಡಂತಿವೆ:

| ಕ್ರಮ ಸಂಖ್ಯೆ | ತಾಲ್ಲೂಕುಗಳ ಹೆಸರು | ಬಾಕಿ ಇರುವ ಅರ್ಜಿಗಳ ಸಂಖ್ಯೆ | |
|---|---|---|---|
| | | **94ಸಿ** | **94ಸಿಸಿ** |
| 1 | ಚಿಕ್ಕಮಗಳೂರು | 2029 | 608 |
| 2 | ಮೂಡಿಗೆರೆ | 7583 | 58 |
| 3 | ಶೃಂಗೇರಿ | 4845 | 22 |
| 4 | ಕೊಪ್ಪ | 7122 | 158 |
| 5 | ತರೀಕೆರೆ | 401 | 21 |
| 6 | ಕಡೂರು | 251 | 7 |
| 7 | ನರಸಿಂಹರಾಜಪುರ | 4213 | 0 |
| | **ಒಟ್ಟು** | **26444** | **874** |

ಬಾಕಿ ಇರುವ ಅರ್ಜಿಗಳನ್ನು ನಿಗಧಿತ ಅವಧಿಯೊಳಗೆ ನಿಯಮಾನುಸಾರ ಪರಿಶೀಲಿಸಿ, ವಿಲೇವಾರಿ ಮಾಡಲು ಸಂಬಂಧಿಸಿದ ತಹಶೀಲ್ದಾರ್‌ರವರಿಗೆ ಸೂಚಿಸಲಾಗಿದೆ.

ಆರ್‌ಡಿ 28 ಎಲ್‌ಜಿಯು 2018

**ಆರ್.ವಿ.ದೇಶಪಾಂಡೆ**
ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 63

ಉತ್ತರಿಸಬೇಕಾದ ದಿನಾಂಕ : 09.07.2018

ಸದಸ್ಯರ ಹೆಸರು : ಡಾ|| ಕೆ. ಸುಧಾಕರ್ (ಚಿಕ್ಕಬಳ್ಳಾಪುರ).

ಉತ್ತರಿಸುವ ಸಚಿವರು : ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವ ಜನರು ಈಗಾಗಲೇ ನಿರ್ಮಿಸಿಕೊಂಡಿರುವ ಮನೆಗಳಿಗೆ ಗ್ರಾಮಪಂಚಾಯ್ತಿಯ ವತಿಯಿಂದ ಹಕ್ಕುಪತ್ರಗಳನ್ನು ವಿತರಿಸಲಾಗಿದ್ದರೂ ಸಹ ಪಹಣಿಯಲ್ಲಿ ಸರ್ಕಾರಿ ಜಾಗಗಳು ಎಂಬುದಾಗಿ ನಮೂದಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಭೂ ಮಂಜೂರಾತಿ ಅಧಿನಿಯಮ 1969 ನಿಯಮ 18 ಹಾಗೂ 18A ಪ್ರಕಾರ ಜಿಲ್ಲಾಧಿಕಾರಿ ಹಾಗೂ ತಹಶೀಲ್ದಾರ್‌ರವರು ಹಕ್ಕು ಪತ್ರವನ್ನು ತಮ್ಮ ಸಹಿ ಮಾಡಿ ನೀಡಿದ ಸಂದರ್ಭದಲ್ಲಿ ಮಾತ್ರ ಸರ್ಕಾರಿ ಭೂಮಿಯ ಪಹಣಿ ಬದಲಾವಣೆ ಮಾಡಲು ಅವಕಾಶವಿರುತ್ತದೆ. |
| ಆ) | ಕಂದಾಯ ಇಲಾಖೆಯ ಜಮೀನುಗಳನ್ನು ಗ್ರಾಮ ಠಾಣೆಗಳಾಗಿ ಪರಿವರ್ತಿಸುವಲ್ಲಿ ಯಾವ ರೀತಿಯ ಕ್ರಮ ಕೈಗೊಳ್ಳಲಾಗಿದೆ? (ವಿವರ ನೀಡುವುದು) | ಗ್ರಾಮ ಪಂಚಾಯತಿ ವ್ಯಾಪ್ತಿಯ ಗ್ರಾಮಗಳ ಗ್ರಾಮ ಠಾಣಾ ಗಡಿ ತುಂಬಾ ಹಿಂದೆ ನಿಗದಿಪಡಿಸಿದ್ದು, ಪ್ರಸ್ತುತ ವಿಸ್ತರಣೆಯಾಗಿರುವ ಪ್ರದೇಶ ಒಳಗೊಂಡಂತೆ ಹೊಸದಾಗಿ ಸರ್ವೆ ಮಾಡಿಸಿ ಗ್ರಾಮ ಠಾಣಾವನ್ನು ಪುನರ್ ನಿಗದಿಪಡಿಸುವ ಬಗ್ಗೆ ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಜಂಟಿಯಾಗಿ ದಿನಾಂಕ: 28.10.2016 ರಂದು ಸುತ್ತೋಲೆ ಹೊರಡಿಸಿರುತ್ತದೆ (ಸುತ್ತೋಲೆ ಪ್ರತಿ ಲಗತ್ತಿಸಿದೆ). |

ಆರ್‌ಡಿ 70 ಎಂಆರ್‌ಆರ್ 2018

ಆರ್.ವಿ. ದೇಶಪಾಂಡೆ

ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

Provided that the extent of land granted shall not together with the land already held by the grantee exceed the ceiling area specified in the Karnataka Land Reforms Act, 1961.

[1][**17-A. Procedure for grant of land for non-agricultural purposes.**—(1) Any person desiring the grant of land for any non-agricultural purposes shall make an application to the Tahsildar of the taluk in which the land is situated furnishing the following particulars,—

(i) name, age (if the applicant is an individual) and address;

(ii) the extent and particulars of land applied for, namely, survey number, village, taluk and sub-division in which the land is situated;

(iii) if the applicant is an individual, whether he or any member of his family had previously applied for the said land, if so, the particulars of such application;

(iv) the particulars of any land previously granted;

(v) if the applicant is an individual, the particulars of any land previously granted to any member of his family;

(vi) the purpose for which the land is required.

(2) On receipt of such application, the Tahsildar shall cause the particulars of the application to be entered in a register to be kept for the purpose. The Tahsildar shall make such enquiry as he thinks fit with a view to satisfy himself that the applicant has *bona fide* intention of using the land for the purpose for which it has been applied for. If the land applied for is available for grant, the Tahsildar shall submit a report to the Deputy Commissioner along with the application and the connected records.]

**18. Grant of building sites.**—(1) The Deputy Commissioner may grant building sites after reserving 18 per cent of the sites available for the members of the Scheduled Castes and Scheduled Tribes where necessary subject to all or any of the following conditions, on payment of such price as he may fix which shall not except in specially deserving cases be less than the market value of such site:

1. Rule 17-A inserted by Notification No. RD 255 LGP 72, dated 9-5-1973, w.e.f. 14-6-1973.



Provided that no site shall be granted to a person who owns a home or a site within the village, town or city concerned [1][or who has been] granted a site by any authority during the last twenty years.

(a) the site shall not be tenanted for a period of five years from the date on which the grantee takes possession of the site. If the grantee desires to alienate the site after five years and within a period of fifteen years, previous sanction of the Deputy Commissioner shall be obtained. The Deputy Commissioner may sanction such alienation, after recovery of the amount equal to fifty per cent of the market value of such site on the date of sanction:

Provided that mortgage of the site in favour of [2][the State Government or] the Karnataka Housing Board or a House Building Co-operative Society or a Scheduled Bank or Life Insurance Corporation of India for obtaining loan for construction of building or improvement of building shall not be regarded as alteration for the purpose of this rule;

(b) the grantee shall not use the site for any purpose other than that for which it is granted;

[3][(bb) the grantee shall utilise the site for the purpose for which it was granted within two years from the date of taking possession:

Provided that the authority granting the site may, if satisfied, that the grantee not for *bona fide* reason utilise the site within the said period, by order, in writing, extend the time for a further period not exceeding two years;]

(c) the utilisation of the grant shall be subject to any law relating to the Local Authority having jurisdiction over the area in which the site is situated;

(d) contravention of any of the aforesaid conditions shall render the building site liable to resumption at the discretion of the

1. Substituted for the words "and who has been" by Notification No. RD 3 LGW 71, dated 12-10-1971, w.e.f. 21-10-1971.
2. Inserted by Notification No. RD 5 LGN 72, dated 4-8-1972, w.e.f. 17-8-1972.
3. Clause (bb) and the proviso inserted by Notification No. RD 23 LGW 71, dated 1-9-1972, w.e.f. 7-9-1972.

Deputy Commissioner without payment of any compensation to the grantee.

(2) Where a building site cannot with advantage be granted as an independent site, the adjoining holder, if he so desires, may be granted such site at such value as the Deputy Commissioner may determine.

(3) Notwithstanding anything contained in these rules, the Deputy Commissioner, may grant sites on payment of upset price fixed by him for any educational or charitable institution or to a public authority and free of charge to persons belonging to [1][Scheduled Castes or Scheduled Tribes or to a siteless person of the village whose annual income including that of his family, does not exceed [2][rupees eight thousand and four hundred.]]

(4) When a building site is reserved for a specific purpose, the Deputy Commissioner may lease such site temporarily, for a period not exceeding twelve months, subject to recovery of rent to be fixed by him having regard to the circumstances and the purpose in each case.

[3][(5) A building site to be granted under this rule shall not exceed [4][five ares.]]

(6) Notwithstanding anything stated in this rule or in the Government Notification No. RD 26 GNA 69, dated 21st June, 1969, it shall be competent for the Tahsildar of a taluk to grant building sites not exceeding [5][two ares] within the limits of any [6][Grama Panchayat] in the taluk and not exceeding [7][one are] in Town Panchayat limits, to poor residents without the Panchayat limits who do not own any house or a building site:

1. Substituted for the words "Scheduled Castes or Scheduled Tribes" by Notification No. RD 134 LGP 90, dated 13-8-1991, w.e.f. 21-8-1991.
2. Substituted for the words "rupees two thousand" by Notification No. RD 144 LGP 91, dated 28-2-1992 and shall be deemed to have been substituted w.e.f. 1-11-1991.
3. Sub-rule (5) substituted by Notification No. RD 42 LGP 70, dated 7-11-1970, w.e.f. 12-11-1970.
4. Substituted for the words "five acres" by Notification No. RD 8 LGP 94, dated 11-10-1994, w.e.f. 15-11-1994.
5. Substituted for the words "two acres" by Notification No. RD 8 LGP 94, dated 11-10-1994, w.e.f. 15-11-1994.
6. Substituted for the words "Village Panchayat" by Notification No. RD 59 LGP 99, dated 22-1-2000, w.e.f. 24-1-2000.
7. Substituted for the words "one acre" by Notification No. RD 8 LGP 94, dated 11-10-1994, w.e.f. 15-11-1994.



[1][Provided that in such areas as the State Government may, by notification specify, the officers specified in such notification shall be and the Tahsildar of the taluks shall not be competent within their respective jurisdiction to grant building sites to the extent and subject to the conditions specified in this sub-rule.]

[2][**18-A. Grant of land for House Site Scheme, etc.**—Notwithstanding anything contained in these rules,—

(i) the Deputy Commissioner may make available the land belonging to the State Government for the purpose of grant of house sites to siteless persons under any scheme as may be framed by the Government from time to time;

(ii) committee, if any, constituted under such scheme shall subject to the general or special orders of the Government in the concerned Department select the beneficiaries under the relevant scheme and send the list of selected beneficiaries to the Tahsildar; and

(iii) the Tahsildar or any other officer specified by the Government shall on receipt of such list of selected beneficiaries grant house sites to the beneficiaries and also issue grant certificate in such manner and subject to such restrictions and conditions as may be specified by the concerned Department of the Government from time to time.]

**19. Lease of lands.**—(1) The Deputy Commissioner may, subject to availability, lease lands to,—

(a) Educational Institutions;

(b) Co-operative Farming Societies;

(c) [3][Grama Panchayats, Taluk Panchayats and Zilla Panchayats]; and

(d) Any Company or Association for purposes of agriculture, industry, or any public utility.

(2)(a) The extent of land to be leased in favour of the Educational Institutions such as Schools, Colleges,

1. Proviso to sub-rule (6) added by Notification No. RD 17 LGR 71, dated 15-6-1972, w.e.f. 29-6-1972.
2. Rule 18-A inserted by Notification No. RD 89 LGP 99, dated 9-2-2000, w.e.f. 9-2-2000.
3. Substituted for the words "Village Panchayats and Taluk Development Boards" by Notification No. RD 59 LGP 99, dated 22-1-2000, w.e.f. 24-1-2000.

**ಕರ್ನಾಟಕ ಸರ್ಕಾರ**

ಸಂ:ಗ್ರಾಅಪ/441/ಗ್ರಾಪಂಅ/2016 (ಭಾಗ-3)

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ: 28-10-2016.

**ಸುತ್ತೋಲೆ**

ವಿಷಯ: ಗ್ರಾಮ ಪಂಚಾಯತಿ ವ್ಯಾಪ್ತಿಯ ಗ್ರಾಮಗಳ ಗ್ರಾಮಠಾಣಾ ಗಡಿ ತುಂಬಾ ಹಿಂದೆ ನಿಗದಿಪಡಿಸಿದ್ದು, ಪ್ರಸ್ತುತ ವಿಸ್ತರಣೆಯಾಗಿರುವ ಪ್ರದೇಶ ಒಳಗೊಂಡಂತೆ ಹೊಸದಾಗಿ ಸರ್ವೆ ಮಾಡಿಸಿ ಗ್ರಾಮಠಾಣಾವನ್ನು ಪುನರ್ ನಿಗದಿಪಡಿಸುವ ಬಗ್ಗೆ.

ಉಲ್ಲೇಖ: ದಿನಾಂಕ 21.09.2016 ರಂದು ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಮತ್ತು ಕಂದಾಯ ಸಚಿವರ ಜಂಟಿ ಅಧ್ಯಕ್ಷತೆಯಲ್ಲಿ ಇ-ಸ್ವತ್ತು ಯೋಜನೆ ಅನುಷ್ಠಾನದ ಬಗೆಗಿನ ಸಮಸ್ಯೆಗಳ ಬಗ್ಗೆ ನಡೆದ ಸಭೆಯ ನಡವಳಿಗಳು.

---

ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ (ಗ್ರಾಮ ಪಂಚಾಯತಿಗಳ ಆಯವ್ಯಯ ಮತ್ತು ಲೆಕ್ಕಪತ್ರಗಳು) ನಿಯಮಗಳು, 2006 ರ ನಿಯಮ 28 ರಂತೆ ರಾಜ್ಯದ ಗ್ರಾಮ ಪಂಚಾಯತಿಗಳ ಗ್ರಾಮಠಾಣಾ ವ್ಯಾಪ್ತಿಯಲ್ಲಿ ಬರುವ ಆಸ್ತಿಗಳ ತೆರಿಗೆ ನಿರ್ಧರಣೆ ಪಟ್ಟಿಯನ್ನು ನಮೂನೆ-9 ರಲ್ಲಿ ಮತ್ತು ನಿಯಮ 30 ರಂತೆ ಭೂಮಿ ಮತ್ತು ಕಟ್ಟಡದ ತೆರಿಗೆಗಳ ಬೇಡಿಕೆ ಮತ್ತು ವಸೂಲಾತಿ ರಿಜಿಸ್ಟರ್ ಅನ್ನು ನಮೂನೆ-11ಎ ರಲ್ಲಿ ಗ್ರಾಮ ಪಂಚಾಯತಿಗಳು ನಿರ್ವಹಿಸುತ್ತಿವೆ.

ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 ರ ಪ್ರಕರಣ 148 ಮತ್ತು ಕರ್ನಾಟಕ ಭೂ ಕಂದಾಯ ನಿಯಮಾವಳಿ 1966 ರ ನಿಯಮ 82 ರಂತೆ ಕೃಷಿಯೇತರ ಜಮೀನಿನಲ್ಲಿರುವ ಆಸ್ತಿಗಳಿಗೆ ಸಂಬಂಧಿಸಿದಂತೆ ಭೂ ಮಾಪನ ವ್ಯವಸ್ಥೆ ಮತ್ತು ಭೂ ದಾಖಲೆಗಳ ಇಲಾಖೆಯು ಪಟ್ಟಣಗಳಲ್ಲಾಗಲಿ, ನಗರಗಳಲ್ಲಾಗಲಿ ಅಥವಾ ಹಳ್ಳಿಗಳಲ್ಲಾಗಲಿ ದಾಖಲೆಗಳನ್ನು ನಿರ್ವಹಿಸುವ ಜವಾಬ್ದಾರಿ ಹೊಂದಿರುತ್ತದೆ.

ಪ್ರಸ್ತುತ ಇರುವ ಗ್ರಾಮ ಪಂಚಾಯತಿ ವ್ಯಾಪ್ತಿಯ ಗ್ರಾಮಠಾಣಾದ ಜೊತೆಗೆ ಗ್ರಾಮಗಳಲ್ಲಿ ಗ್ರಾಮಠಾಣಾಕ್ಕೆ ಹೊಂದಿಕೊಂಡಂತೆ ಗ್ರಾಮಗಳ ಬೆಳವಣಿಗೆಯಾಗಿದ್ದು, ಗ್ರಾಮಠಾಣಾದ ಅಕ್ಕಪಕ್ಕದಲ್ಲಿ ವಿವಿಧ ವಸತಿ ಯೋಜನೆಗಳಡಿ ಹಕ್ಕುಪತ್ರ ವಿತರಿಸಿ ಮನೆ ನಿರ್ಮಾಣ ಮಾಡಿಕೊಂಡಿರುತ್ತಾರೆ. ಇದಲ್ಲದೆ ಕೃಷಿ ಭೂಮಿಯಲ್ಲಿ ಮನೆಗಳನ್ನು ನಿರ್ಮಾಣ ಮಾಡಿಕೊಂಡಿದ್ದು, ಅವು ಸಕ್ರಮಗೊಂಡಿರುತ್ತವೆ. ಈ ಪ್ರದೇಶಗಳು ಗ್ರಾಮಠಾಣಾ ವ್ಯಾಪ್ತಿಗೆ ಒಳಪಡದಿರುವುದರಿಂದ ನಾಗರೀಕರು ಆಸ್ತಿಗಳಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯತಿಗಳಿಂದ ನಮೂನೆ-9 ಮತ್ತು 11ಎ ಪಡೆಯಲು ತುಂಬಾ ಅನಾನುಕೂಲವಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.

ಈ ಹಿನ್ನೆಲೆಯಲ್ಲಿ ದಿನಾಂಕ:21-09-2016 ರಂದು ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಮತ್ತು ಕಂದಾಯ ಸಚಿವರ ಸಮಕ್ಷಮ ಇ-ಸ್ವತ್ತು ಯೋಜನೆ ಅನುಷ್ಠಾನದ ಬಗೆಗಿನ ಸಮಸ್ಯೆಗಳ ಬಗ್ಗೆ ನಡೆದ ಸಭೆಯಲ್ಲಿ ಈ ವಿಷಯದ ಬಗ್ಗೆ ಸವಿವರವಾಗಿ ಚರ್ಚಿಸಲಾಗಿದ್ದು, ಗ್ರಾಮ ಪಂಚಾಯತಿ ವ್ಯಾಪ್ತಿಯ ಗ್ರಾಮಗಳ ಗ್ರಾಮಠಾಣಾ ಗಡಿ ತುಂಬಾ ಹಿಂದೆ ನಿಗದಿಪಡಿಸಿದ್ದು, ಪ್ರಸ್ತುತ ವಿಸ್ತರಣೆಯಾಗಿರುವ ಪ್ರದೇಶ ಒಳಗೊಂಡಂತೆ ಹೊಸದಾಗಿ ಸರ್ವೆ ಮಾಡಿಸಿ ಗ್ರಾಮಠಾಣಾವನ್ನು ಪುನರ್ ನಿಗದಿಪಡಿಸುವ ಬಗ್ಗೆ ತೀರ್ಮಾನ ತೆಗೆದುಕೊಳ್ಳಲಾಗಿದೆ.

ಈ ಹಿನ್ನೆಲೆಯಲ್ಲಿ ಗ್ರಾಮ ಪಂಚಾಯತಿ ವ್ಯಾಪ್ತಿಯ ಗ್ರಾಮಗಳ ಗ್ರಾಮಠಾಣಾ ಗಡಿಯನ್ನು ಪ್ರಸ್ತುತ ವಿಸ್ತರಣೆಯಾಗಿರುವ ಪ್ರದೇಶವನ್ನು ಒಳಗೊಂಡಂತೆ ಹೊಸದಾಗಿ ಸರ್ವೆ ಮಾಡಿಸಿ ಪುನರ್ ನಿಗದಿಪಡಿಸುವ ಬಗ್ಗೆ ಕಂದಾಯ ಇಲಾಖೆ ಮತ್ತು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಈ ಕೆಳಗಿನಂತೆ ಕ್ರಮ ವಹಿಸುವಂತೆ ಆದೇಶಿಸಿದೆ.

1) ಗ್ರಾಮ ಪಂಚಾಯಿತಿ ವ್ಯಾಪ್ತಿಯ ಗ್ರಾಮಗಳ ಗ್ರಾಮ ಠಾಣಾ ಗಡಿ ತುಂಬಾ ಹಿಂದೆ ನಿಗದಿಪಡಿಸಿದ್ದು, ಮೂಲ ಗ್ರಾಮಠಾಣಾದ ಜೊತೆಗೆ ಹೊಂದಿಕೊಂಡಂತೆ ಪ್ರಸ್ತುತ ವಿಸ್ತರಣೆಯಾಗಿರುವ ಪ್ರದೇಶ ಒಳಗೊಂಡಂತೆ ಹೊಸದಾಗಿ ಸರ್ವೆ ಮಾಡಲು ಕ್ರಮ ವಹಿಸುವುದು.

2) ಸರ್ವೆಯರ್‌ಗೆ ಗ್ರಾಮ ಪಂಚಾಯತಿ ಕಾರ್ಯದರ್ಶಿ ಮತ್ತು ಗ್ರಾಮ ಲೆಕ್ಕಾಧಿಕಾರಿಗಳು ಸಹಕಾರ ನೀಡುವುದು.

3) ಗ್ರಾಮಠಾಣಾದ ಜೊತೆಗೆ ಹೊಂದಿಕೊಂಡಂತೆ ಪ್ರಸ್ತುತ ವಿಸ್ತರಣೆಯಾಗಿರುವ ಪ್ರದೇಶದ ಬಗ್ಗೆ ವಾರ್ಡ್ ಸಭೆ ಮತ್ತು ಗ್ರಾಮ ಸಭೆಗಳಲ್ಲಿ ಕಂದಾಯ ಇಲಾಖೆಯ ಗ್ರಾಮ ಲೆಕ್ಕಿಗರು, ರಾಜಸ್ವ ನಿರೀಕ್ಷಕರು ರವರು ಹಾಜರಾಗಿ ಈ ಬಗ್ಗೆ ಚರ್ಚಿಸಿ ತೀರ್ಮಾನ ತೆಗೆದುಕೊಳ್ಳುವುದು.

4) ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು ವಾರ್ಡ್‌ಸಭೆ ಮತ್ತು ಗ್ರಾಮ ಸಭೆ ಹಾಗೂ ಸಾಮಾನ್ಯ ಸಭೆಗೆ ಕಂದಾಯ ಇಲಾಖೆಯ ಅಧಿಕಾರಿ / ನೌಕರರುಗಳನ್ನು ಆಹ್ವಾನಿಸುವುದು.

5) ಸರ್ವೆ ಮಾಡಿದ ಗ್ರಾಮಠಾಣಾ ವಿಸ್ತರಣೆಯ ಬಗ್ಗೆ ಗ್ರಾಮ ಪಂಚಾಯತಿ ಸಭೆಯಲ್ಲಿ ಸವಿವರವಾಗಿ ಚರ್ಚಿಸಿ ನಿರ್ಣಯ ತೆಗೆದುಕೊಂಡು, ತದನಂತರ ತಾಲ್ಲೂಕಿನ ತಹಶೀಲ್ದಾರ್ ಮತ್ತು ತಾಲ್ಲೂಕು ಪಂಚಾಯತಿ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸುವುದು.

6) ತಹಶೀಲ್ದಾರ ರವರು ಮತ್ತು ಕಾರ್ಯನಿರ್ವಾಹಕ ಅಧಿಕಾರಿಗಳು, ಈ ಬಗ್ಗೆ ಸ್ಥಳ ಪರಿಶೀಲನೆ ನಡೆಸಿ ಗ್ರಾಮಠಾಣಾ ವಿಸ್ತರಣೆ ಪ್ರದೇಶ ವಿಸ್ತರಣೆಯಾಗಿರುವ ಬಗ್ಗೆ ಕ್ರಮಬದ್ಧಪಡಿಸಿಕೊಂಡು ತದನಂತರ ಉಪವಿಭಾಗಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸುವುದು.

7) ಉಪವಿಭಾಗಾಧಿಕಾರಿಗಳು ಪ್ರಸ್ತಾವನೆಯನ್ನು ಪರಿಶೀಲಿಸಿ ಕ್ರಮಬದ್ಧವಾಗಿರುವುದನ್ನು ಖಚಿತಪಡಿಸಿಕೊಂಡು ಭೂ ಮಾಪನ ವ್ಯವಸ್ಥೆ ಮತ್ತು ಭೂ ದಾಖಲೆಗಳ ಇಲಾಖೆಯ ಉಪನಿರ್ದೇಶಕರಿಗೆ ಸಲ್ಲಿಸುವುದು.

8) ಭೂ ದಾಖಲೆಗಳ ಉಪನಿರ್ದೇಶಕರು ಗ್ರಾಮಠಾಣಾ ವಿಸ್ತರಣೆಯ ಪ್ರಸ್ತಾವನೆಯನ್ನು ಪರಿಶೀಲಿಸಿ ಜಿಲ್ಲಾಧಿಕಾರಿಗಳಿಗೆ ಸಲ್ಲಿಸುವುದು.

9) ತದನಂತರ ಪ್ರಸ್ತಾವನೆಯನ್ನು ಪರಿಶೀಲಿಸಿ ಜಿಲ್ಲಾಧಿಕಾರಿಗಳು ಗ್ರಾಮಠಾಣಾ ವಿಸ್ತರಣೆ ಬಗ್ಗೆ ಆದೇಶ ಹೊರಡಿಸಲು ಕ್ರಮ ವಹಿಸುವುದು.

10) ಒಂದು ವೇಳೆ, ಸರ್ವೆಯರ್‌ಗಳ ಲಭ್ಯತೆ ಇಲ್ಲದಿದ್ದಲ್ಲಿ ನಿವೃತ್ತ ಸರ್ವೆಯರ್‌ಗಳನ್ನು ನೇಮಿಸಿಕೊಳ್ಳುವುದು.

(ಡಾ: ಎನ್. ನಾಗಂಬಿಕಾದೇವಿ)
ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪಂ.ರಾಜ್)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

(ಡಾ ಇ.ವಿ. ರಮಣರೆಡ್ಡಿ)
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಕಂದಾಯ ಇಲಾಖೆ.

ಗೆ:

1) ಆಯುಕ್ತರು, ಭೂ ಮಾಪನ ವ್ಯವಸ್ಥೆ ಮತ್ತು ಭೂ ದಾಖಲೆಗಳ ಇಲಾಖೆ, ಬೆಂಗಳೂರು
2) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.
3) ಎಲ್ಲಾ ಪ್ರಾದೇಶಿಕ ಆಯುಕ್ತರು,
4) ಎಲ್ಲಾ ಜಿಲ್ಲಾಧಿಕಾರಿಗಳು,
5) ಎಲ್ಲಾ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು,
6) ಎಲ್ಲಾ ಉಪವಿಭಾಗಾಧಿಕಾರಿಗಳು,
7) ಎಲ್ಲಾ ತಾಲ್ಲೂಕು ಪಂಚಾಯತ್‌ಗಳ ಕಾರ್ಯನಿರ್ವಾಹಕ ಅಧಿಕಾರಿಗಳು,
8) ಎಲ್ಲಾ ತಹಶೀಲ್ದಾರ್‌ಗಳು
9) ಎಲ್ಲಾ ಗ್ರಾಮ ಪಂಚಾಯತಿಗಳ ಅಧ್ಯಕ್ಷರು/ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು.

ಪ್ರತಿ:

1. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರ ಆಪ್ತ ಕಾರ್ಯದರ್ಶಿಯವರು.
2. ಮಾನ್ಯ ಕಂದಾಯ ಸಚಿವರ ಆಪ್ತ ಕಾರ್ಯದರ್ಶಿಯವರು
3. ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪಂ.ರಾಜ್) ರವರ ಆಪ್ತ ಕಾರ್ಯದರ್ಶಿ, ಗ್ರಾಅಪ ಇಲಾಖೆ.
4. ಸರ್ಕಾರದ ಪ್ರಧಾನ ಕಾರ್ಯದರ್ಶಿ ರವರ ಆಪ್ತ ಕಾರ್ಯದರ್ಶಿ, ಕಂದಾಯ ಇಲಾಖೆ.
5. ಎಲ್ಲಾ ಸರ್ಕಾರದ ಉಪಕಾರ್ಯದರ್ಶಿಗಳು, ಕಂದಾಯ ಇಲಾಖೆ.
6. ಸಂಪಾದಕರು, ಕರ್ನಾಟಕ ವಿಕಾಸ ಪತ್ರಿಕೆ/ವೆಬ್‌ಸೈಟ್, ಗ್ರಾ.ಅ ಮತ್ತು ಪಂ.ರಾಜ್ ಇಲಾಖೆ.
7. ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿ.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 07 |
| ಸದಸ್ಯರ ಹೆಸರು : | ಶ್ರೀ ಅಮೀನಪ್ಪಗೌಡ ಎಸ್ ಪಾಟೀಲ್(ನಡಹಳ್ಳಿ)(ಮುದ್ದೇಬಿಹಾಳ) |
| ಉತ್ತರಿಸಬೇಕಾದ ದಿನಾಂಕ: | 09.07.2018 |
| ಉತ್ತರಿಸುವ ಸಚಿವರು : | ಮಾನ್ಯ ಗಣಿ ಮತ್ತು ಭೂವಿಜ್ಞಾನ ಹಾಗೂ ಮುಜರಾಯಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ವಿಜಯಪುರ ಜಿಲ್ಲೆ ಮುದ್ದೇಬಿಹಾಳ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಕೃಷ್ಣಾ ನದಿ (ನಾರಾಯಣಪುರ ಡ್ಯಾಂ) ಹಿನ್ನೀರಿನಲ್ಲಿ ಅಕ್ರಮವಾಗಿ ಮರಳು ಸಾಗಾಣಿಕೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>ವಿಜಯಪುರ ಜಿಲ್ಲೆ, ಮುದ್ದೇಬಿಹಾಳ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಕೃಷ್ಣಾ ನದಿ ಪಾತ್ರದ ನಾರಾಯಣಪುರ ಆಣೆಕಟ್ಟಿನ ಹಿನ್ನೀರಿನಲ್ಲಿ ಹಾಗೂ ಸುತ್ತ ಮುತ್ತ ಪ್ರದೇಶಗಳಲ್ಲಿ 2016-17 ನೇ ಸಾಲಿನಿಂದ 2018-19 ನೇ ಸಾಲಿನ ಜೂನ್ ಅಂತ್ಯದವರೆಗೆ ಅನಧಿಕೃತ ಮರಳು ಗಣಿಗಾರಿಕೆ/ಸಾಗಾಣಿಕೆಯಡಿಯಲ್ಲಿ ತೊಡಗಿರುವ ವ್ಯಕ್ತಿಗಳು /ವಾಹನ ಚಾಲಕರು/ಮಾಲೀಕರುಗಳ ವಿರುದ್ಧ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿಗಳು, 1994 ರ ನಿಯಮ 3(1) & 42, ಗಣಿ ಮತ್ತು ಖನಿಜಗಳ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ -1957 ರ ಸೆಕ್ಷನ್ 4(1) & 4(1-A) ಹಾಗೂ ಐ.ಪಿ.ಸಿ ಸೆಕ್ಷನ್ 379 ರಡಿಯಲ್ಲಿ 27 ಪ್ರಕರಣಗಳನ್ನು ಸಂಬಂಧಪಟ್ಟ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುತ್ತವೆ. ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ | ಹಾಗಿದ್ದಲ್ಲಿ, ಇದುವರೆಗೂ ದಾಖಲಾಗಿರುವ ಪ್ರಕರಣಗಳೆಷ್ಟು; (ವಿವರ ಒದಗಿಸುವುದು) | |
| ಇ | ಮುದ್ದೇಬಿಹಾಳ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಕೃಷ್ಣಾ ನದಿ (ನಾರಾಯಣಪುರ ಡ್ಯಾಂ) ಹಿನ್ನೀರಿನಲ್ಲಿ ಕಾನೂನುಬದ್ಧವಾಗಿ ಮರಳು ಮಾರಾಟಕ್ಕೆ ಯಾರ್ಡ್(ಬ್ಲಾಕ್) ಮಾಡಲು ಅವಕಾಶ ಇದೆಯೇ; | ಕೃಷ್ಣಾ ನದಿ ಪಾತ್ರದ ನಾರಾಯಣಪುರ ಆಣೆಕಟ್ಟು ಹಿನ್ನೀರಿನ ಪ್ರದೇಶದಲ್ಲಿ ವರ್ಷವಿಡಿ ನೀರು ಇರುತ್ತದೆ. ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಾವಳಿ-1994 ರ ನಿಯಮ 31R ಉಪನಿಯಮ 17 ರಂತೆ In-streamನಲ್ಲಿ ಮರಳು ಗಣಿಗಾರಿಕೆಯನ್ನು ನಿಷೇಧಿಸಲಾಗಿರುತ್ತದೆ. ಆದುದರಿಂದ ಕೃಷ್ಣಾ ನದಿ ಪಾತ್ರದ ನಾರಾಯಣಪುರ ಆಣೆಕಟ್ಟು ಹಿನ್ನೀರಿನ ಪ್ರದೇಶದಲ್ಲಿ ಮರಳು ಬ್ಲಾಕ್‌ಗಳನ್ನು ಗುರುತಿಸಿರುವುದಿಲ್ಲ. |
| ಈ | ಹಾಗಿದ್ದಲ್ಲಿ, ಅಕ್ರಮ ಮರಳು ಸಾಗಾಣಿಕೆ ತಡೆಗಟ್ಟಲು ಅನುಕೂಲವಾಗುವಂತೆ ಇಲಾಖೆಯಿಂದ ಯಾರ್ಡ್ ನಿರ್ಮಾಣ ಮಾಡಲು ಕ್ರಮಕೈಗೊಳ್ಳಲಾಗುವುದೇ? | |

ಸಂಖ್ಯೆ:ಸಿಐ 240 ಎಂಎಂಎನ್ 2018

(ರಾಜಶೇಖರ ಬಿ. ಪಾಟೀಲ)
ಗಣಿ ಮತ್ತು ಭೂ ವಿಜ್ಞಾನ ಹಾಗೂ ಮುಜರಾಯಿ ಸಚಿವರು

07/07/2018, 10:32 AM

ಅನುಬಂಧ

| ಕ್ರ.ಸಂ | ಎಫ್.ಐ.ಆರ್. ಸಂಖ್ಯೆ ಮತ್ತು ದಿನಾಂಕ | ಆರೋಪಿಗಳ ಹೆಸರು | ಜಪ್ತಿ ಮಾಡಿದ ವಾಹನ ಸಂಖ್ಯೆ |
|---|---|---|---|
| 1. | 133/2016 ದಿ:01.07.2016 | ಯಲ್ಲಪ್ಪ ತಂ.ರತ್ನಪ್ಪ ಪೂಜಾರಿ | 1 ಟಿಪ್ಪರ್ |
| 2. | 236/2016 ದಿ:04.11.2016 | ಸಂಗಮೇಶ ತಂ. ಚನ್ನಪ್ಪ ಚೌಧರಿ | 1 ಟ್ರ್ಯಾಕ್ಟರ್ |
| 3. | 108/2017 ದಿ:11.05.2017 | ಬಡೆಸಾಬ ತಂ. ನಬಿಸಾಬ ಮತ್ತು ಇತರ 3 ಜನ | 4 ಟ್ರ್ಯಾಕ್ಟರ್ |
| 4. | 197/2017 ದಿ:26.07.2017 | ನಾಗರೆಡ್ಡಿ ತಂ.ಮಲ್ಲಿಕಾರ್ಜುನ | 1 ಟ್ರ್ಯಾಕ್ಟರ್ |
| 5. | 240/2017 :22.08.2017 | ಸಂಗಪ್ಪ ತಂ. ಚನ್ನಪ್ಪ ಹರಿಜನ | 1 ಟ್ರ್ಯಾಕ್ಟರ್ |
| 6. | 297/2017 ದಿ:27.10.2017 | ಮೈನುದ್ದೀನ್ ತಂ. ಗಫೂರಸಾಬ | 1 ಟಿಪ್ಪರ್ |
| 7. | 308/2017 ದಿ:17.11.2017 | KA-28 3814 ಟ್ರಾಕ್ಟರ್ ಚಾಲಕರು ಹಾಗೂ ಮಾಲೀಕರ ವಿರುದ್ಧ | 1 ಟ್ರ್ಯಾಕ್ಟರ್ |
| 8. | 316/2017 ದಿ:04.12.2017 | ಶಂಕರ ತಂ ಈರಪ್ಪ ಮುರಡಿ | 1 ಟಿಪ್ಪರ್ |
| 9. | 317/2017 ದಿ:04.12.2017 | ಶಂಕರಗೌಡ ತಂ.ಅಣ್ಣಪ್ಪಗೌಡ ಪಾಟೀಲ | 1 ಟ್ರ್ಯಾಕ್ಟರ್ |
| 10. | 60/2018 ದಿ:15.03.2018 | ಅಶೋಕ ತಂ.ಈರಣ್ಣ ಮತ್ತು ಭೀಮನಗೌಡ ತಂ. ಬಸವಗೌಡ ಚಿತ್ರಾಯ | 2 ಟ್ರ್ಯಾಕ್ಟರ್ |
| 11. | 139/2018 ದಿ:05.07.2018 | ಹುಸೇನಸಾಬ ತಂ ಇಮಾಮಸಾಬ ಮತ್ತು ಗುರುನಾಥ ತಂ ದೇವಪ್ಪ ದೊಡ್ಡಮನಿ | 1 ಟಿಪ್ಪರ್<br>1 ಜೆಸಿಬಿ |
| 12. | 34/2017 ದಿ:22.02.2017 | ಮೋಹನ ತಂ.ಹನಮಪ್ಪ ಇತರ 3 ಜನಗಳು | 4 ಟ್ರ್ಯಾಕ್ಟರ್ |
| 13. | 35/2017 ದಿ:22.02.2017 | ನಾನಾಗೌಡ ತಂ.ಭೀಮರಾಯನಗೌಡ ಮತ್ತು ಶರಣಪ್ಪ ತಂ.ಸಿದ್ರಾಮಪ್ಪ | 2 ಟ್ರ್ಯಾಕ್ಟರ್ |
| 14. | 36/2017 ದಿ:22.02.2017 | ನಾನಾಗೌಡ ತಂ.ಭೀಮರಾಯನಗೌಡ | 1 ಟ್ರ್ಯಾಕ್ಟರ್ |
| 15. | 37/2017 ದಿ:23.02.2017 | ವಿಜಯರೆಡ್ಡಿ ತಂ.ಗೌಡಪ್ಪಗೌಡ | 1 ಟ್ರ್ಯಾಕ್ಟರ್ |
| 16. | 96/2017 ದಿ:03.05.2017 | ಹುಲಗಪ್ಪ ತಂ.ಹನುಮಂತ ಮತ್ತು ಇತರೆ ಇಬ್ಬರು | 3 ಟ್ರ್ಯಾಕ್ಟರ್ |
| 17. | 131/2017 ದಿ:01.07.2017 | ಸುನೀಲ ತಂ.ಲಾಲಸಾಬ ಮತ್ತು ಇತರ ಒಬ್ಬರು | 2 ಟ್ರ್ಯಾಕ್ಟರ್ |
| 18. | 21/2018 ದಿ:02.02.2018 | ಪವನ ತಂ.ಮಲ್ಲನಗೌಡ ಮತ್ತು ಸಂಗನಗೌಡ ತಂ ಗಂಗಪ್ಪಗೌಡ | 2 ಟ್ರ್ಯಾಕ್ಟರ್ |
| 19. | 38/2018 ದಿ:17.02.2018 | ಚಂದ್ರಶೇಖರ ತಂ.ಯಮನಪ್ಪ | 2 ಟ್ರ್ಯಾಕ್ಟರ್ |
| 20. | 51/2018 ದಿ:27.02.2018 | ಟ್ರಾಕ್ಟರ್ ಸಂಖ್ಯೆ: ಕೆ.ಎ28- ಪಿ.ಸಿ-3959 ಮಾಲಿಕರು ಹಾಗೂ ಚಾಲಕರು | 1 ಟ್ರ್ಯಾಕ್ಟರ್ |
| 21. | 67/2018 ದಿ:17.03.2018 | ಟ್ರಾಕ್ಟರ್ ಸಂಖ್ಯೆ: ಚೆಸಿ ನಂ.NH7280131 ಮಾಲಿಕರು ಹಾಗೂ ಚಾಲಕರು | 1 ಟ್ರ್ಯಾಕ್ಟರ್ |
| 22. | 118/2018 ದಿ:26.04.2018 | ಮದನಪ್ಪ ತಂ.ಶರಣಪ್ಪ ಮತ್ತು ಇತರರ ಒಬ್ಬರು | 3 ಟ್ರ್ಯಾಕ್ಟರ್ |
| 23. | 155/2018 ದಿ:08.06.2018 | ಟ್ರಾಕ್ಟರ್ ಸಂಖ್ಯೆ: ಕೆ.ಎ28- ಟಿ.ಬಿ-2207 ಮಾಲಿಕರು ಹಾಗೂ ಚಾಲಕರು | 1 ಟ್ರ್ಯಾಕ್ಟರ್ |
| 24. | 164/2018 ದಿ:19.06.2018 | ಮಹಮ್ಮದ್ ಮತ್ತು ಇತರೆ ಒಬ್ಬರು | 3 ಟ್ರ್ಯಾಕ್ಟರ್ |
| 25. | 165/2018 ದಿ:19.06.2018 | ಪ್ರಶಾಂತ ತಂ.ಗೋವಿಂದಪ್ಪ ಮತ್ತು ಇತರರು | 3 ಟ್ರ್ಯಾಕ್ಟರ್ |
| 26. | 168/2018 ದಿ:21.06.2018 | ರುದ್ರಪ್ಪ ತಂ. ಬಸಪ್ಪ ಹಾಗೂ ಇತರರು | 2 ಟ್ರ್ಯಾಕ್ಟರ್ |
| 27. | 174/2018 ದಿ:1.07.2018 | ಲಕ್ಕಪ್ಪ ತಂ.ರಮಣಪೂಜಾರಿ ಮತ್ತು ಇತರ ಒಬ್ಬರು | 2 ಟ್ರ್ಯಾಕ್ಟರ್ |

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 92 |
| ಸದಸ್ಯರ ಹೆಸರು : | ಶ್ರೀ ಸಿದ್ದು ಸವದಿ (ತೇರದಾಳ) |
| ಉತ್ತರಿಸಬೇಕಾದ ದಿನಾಂಕ: | 09.07.2018 |
| ಉತ್ತರಿಸುವ ಸಚಿವರು : | ಮಾನ್ಯ ಗಣಿ ಮತ್ತು ಭೂವಿಜ್ಞಾನ ಹಾಗೂ ಮುಜರಾಯಿ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ತೇರದಾಳ ಮತ ಕ್ಷೇತ್ರದಲ್ಲಿ ಮರಳಿನ ಅಭಾವದಿಂದಾಗಿ ಅಭಿವೃದ್ಧಿ ಕೆಲಸಗಳು ನಿಂತು ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ತೇರದಾಳ ಮತ ಕ್ಷೇತ್ರ ವ್ಯಾಪ್ತಿಯಲ್ಲಿ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದ್ದು, ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳು ಮರಳಿನ ಕೊರತೆ ಉಂಟಾಗಿರುವುದು ಕಂಡು ಬಂದಿರುವುದಿಲ್ಲ.<br><br>➢ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು ತೇರದಾಳ ಮತ ಕ್ಷೇತ್ರದ ವ್ಯಾಪ್ತಿಯಲ್ಲಿ ಸಾರ್ವಜನಿಕ ಹಾಗೂ ಸರ್ಕಾರಿ ಅಭಿವೃದ್ಧಿ ಕಾಮಗಾರಿಗಳಿಗೆ ಜಿಲ್ಲಾ ವ್ಯಾಪ್ತಿಯ ಪಟ್ಟಾ ಜಮೀನುಗಳಲ್ಲಿ ಮಂಜೂರಾಗಿರುವ 10 ಮರಳು ಗುತ್ತಿಗೆ ಪ್ರದೇಶಗಳಿಂದ ಮರಳು ಪೂರೈಕೆಯಾಗುತ್ತಿರುತ್ತದೆ. ಅಲ್ಲದೆ ನೆರೆ ಜಿಲ್ಲೆಯಾದ ಬೆಳಗಾವಿ ಸೇರಿದಂತೆ ಇತರ ಅಕ್ಕಪಕ್ಕದ ಜಿಲ್ಲೆಗಳಿಂದ ಎಂ-ಸ್ಯಾಂಡ್ ಹಾಗೂ ಬಳ್ಳಾರಿ ಜಿಲ್ಲೆಯ ತೋರಣಗಲ್‌ನಿಂದ ಸ್ಲ್ಯಾಗ್ ಸ್ಯಾಂಡ್ ಪೂರೈಕೆಯಾಗುತ್ತಿರುತ್ತದೆ.<br>➢ಮುಂದುವರೆದು ಹೆಚ್ಚುವರಿಯಾಗಿ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಮರಳು ಪೂರೈಕೆ ಮಾಡಲು ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕು ವ್ಯಾಪ್ತಿಯ ಕೃಷ್ಣಾ ನದಿ ಪಾತ್ರದಲ್ಲಿ 02 ಮರಳು ಬ್ಲಾಕ್‌ಗಳನ್ನು ಗುರುತಿಸಿ ಟೆಂಡರ್-ಕಂ-ಇ-ಹರಾಜು ಮೂಲಕ ವಿಲೇಪಡಿಸಲು ಕ್ರಮವಹಿಸಲಾಗುತ್ತಿದೆ.<br><br>➢ತೇರದಾಳ ಮತಕ್ಷೇತ್ರ ವ್ಯಾಪ್ತಿಯಲ್ಲಿ 03 ಕಟ್ಟಡ ಕಲ್ಲಿನ ಗಣಿಗುತ್ತಿಗೆಗಳನ್ನು ಹಾಗೂ 03 ಕ್ರಷರ್ ಘಟಕಗಳನ್ನು ನಿಯಮಾನುಸಾರ ಮಂಜೂರು ಮಾಡಲಾಗಿರುತ್ತದೆ. ಅವುಗಳಿಂದ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಜಲ್ಲಿಕಲ್ಲು ಹಾಗೂ ಕಟ್ಟಡ ಕಲ್ಲು ಪೂರೈಕೆಯಾಗುತ್ತಿರುತ್ತದೆ.<br>➢ಗರಸು ಹಾಗೂ ಮಣ್ಣಿನ ಗಣಿಗುತ್ತಿಗೆ ಕೋರಿ ತೇರದಾಳ ಮತ ಕ್ಷೇತ್ರದ ವ್ಯಾಪ್ತಿಯಿಂದ ಇದುವರೆಗೂ ಯಾವುದೇ ಅರ್ಜಿಗಳು ಸ್ವೀಕೃತವಾಗಿರುವುದಿಲ್ಲ ಅರ್ಜಿಗಳನ್ನು ಸಲ್ಲಿಸಿದಲ್ಲಿ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿಗಳು, 1994 ರಂತೆ ನಿಯಮಾನುಸಾರ ಗಣಿಗುತ್ತಿಗೆ ಮಂಜೂರು ಮಾಡಲು ಕ್ರಮವಹಿಸುವುದು. |
| ಆ. | ಬಂದಿದ್ದಲ್ಲಿ ಮರಳು, ಕಲ್ಲು, ಗರಸು ಹಾಗು ಮಣ್ಣು ಪೂರೈಕೆಗೆ ಕೈಗೊಂಡಿರುವ ಕ್ರಮಗಳೇನು; | |
| ಇ. | ಮರಳು ಸರಬರಾಜು ಮಾಡುವ ಟ್ರ್ಯಾಕ್ಟರ್ ಮಾಲೀಕರು, ಡ್ರೈವರ್‌ಗಳು ಹಾಗು ರೈತರುಗಳಿಗೆ ಇಲಾಖೆಯವರು ವಿನಾ ಕಾರಣ ತೊಂದರೆ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಬಗ್ಗೆ ಕೈಗೊಂಡಿರುವ ಕ್ರಮಗಳೇನು; | ಅನಧಿಕೃತ ಮರಳು ಸಾಗಾಣಿಕೆ ಸಂಬಂಧಿಸಿದಂತೆ ಜಿಲ್ಲಾ ಹಾಗೂ ತಾಲ್ಲೂಕು ಮರಳು ಸಮಿತಿ ಸದಸ್ಯ ಇಲಾಖೆ ಅಧಿಕಾರಿಗಳಿಂದ ನಿಯಮಾನುಸಾರ ಕಾನೂನು ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಇಲಾಖೆ ಅಧಿಕಾರಿಗಳು ಖನಿಜ ತುಂಬಿದ ಟ್ರ್ಯಾಕ್ಟರ್/ಲಾರಿ ಮಾಲೀಕರುಗಳಿಗೆ, ಡ್ರೈವರ್‌ಗಳಿಗೆ ಹಾಗೂ ರೈತರಿಗೆ ವಿನಾಕಾರಣ ತೊಂದರೆ ನೀಡುತ್ತಿರುವುದು ಕಂಡುಬಂದಿರುವುದಿಲ್ಲ. |

| ಈ. | ಮರಳು ನೀತಿಯನ್ನು ಸರಳೀಕರಣಗೊಳಿಸಿ ಇಲಾಖೆಯಿಂದಲೇ ಕಡಿಮೆ ಬೆಲೆಯಲ್ಲಿ ಪೂರೈಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? (ವಿವರ ಒದಗಿಸುವುದು) | ರಾಜ್ಯದಲ್ಲಿ ಮರಳಿನ ಕೊರತೆಯನ್ನು ನೀಗಿಸಲು ಹಾಗೂ ಸಾರ್ವಜನಿಕರಿಗೆ ಕೈಗೆಟುವ ದರದಲ್ಲಿ ಮರಳು ಸಿಗುವಂತೆ ಮಾಡಲು ರಾಜ್ಯ ಸರ್ಕಾರವು ದಿನಾಂಕ:12.08.2016 ರಂದು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿಗಳು, 1994 ಕ್ಕೆ ತಿದ್ದುಪಡಿ ತಂದು ತಿದ್ದುಪಡಿ ನಿಯಮಗಳು-2016 ನ್ನು ಜಾರಿಗೊಳಿಸಲಾಗಿದೆ. ತಿದ್ದುಪಡಿಯ ಪ್ರಮುಖಾಂಶಗಳು ಈ ಕೆಳಕಂಡಂತೆ ಇರುತ್ತವೆ.<br>• ನದಿ ಪಾತ್ರಗಳಲ್ಲಿ ಲಭ್ಯವಿರುವ ಮರಳು ಬ್ಲಾಕ್‌ಗಳನ್ನು ಟೆಂಡರ್-ಕಂ-ಇ-ಹರಾಜು ವಿಲೇಪಡಿಸಲು ನಿಯಮಗಳನ್ನು ರೂಪಿಸಲಾಗಿದ್ದು, ಅದರಂತೆ ರಾಜ್ಯದಲ್ಲಿ ಒಟ್ಟು 255 ಮರಳು ಬ್ಲಾಕ್‌ಗಳನ್ನು ವಿಲೇಪಡಿಸಲಾಗಿದ್ದು, ಇವುಗಳ ಪೈಕಿ 165 ಮರಳು ಬ್ಲಾಕ್‌ಗಳಿಗೆ ಗಣಿಗುತ್ತಿಗೆಗಳನ್ನು ಮಂಜೂರು ಮಾಡಲಾಗಿರುತ್ತದೆ. ಸದರಿ ಮರಳು ಬ್ಲಾಕ್‌ಗಳಿಂದ 2017-18 ಸಾಲಿನಲ್ಲಿ 4.44 ಲಕ್ಷ ಮೆ.ಟನ್ ಮರಳನ್ನು ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಗೆ ಪೂರೈಸಲಾಗಿರುತ್ತದೆ.<br>• ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿಗಳು, 1994 ರ ನಿಯಮ 31-ZA ರಲ್ಲಿ ಪಟ್ಟಾ ಜಮೀನುಗಳಲ್ಲಿ ಮರಳು ಗಣಿಗಾರಿಕೆ ನಡೆಸಲು ಅವಕಾಶ ಕಲ್ಪಿಸಲಾಗುತ್ತಿದೆ. ಅದರಂತೆ ರಾಜ್ಯದ ಪಟ್ಟಾ ಜಮೀನುಗಳಲ್ಲಿ 15 ಮರಳು ಲೈಸನ್ಸ್ ಮಂಜೂರು ಮಾಡಲಾಗಿರುತ್ತದೆ. ಸದರಿ ಮರಳು ಬ್ಲಾಕ್‌ಗಳಿಂದ 2017-18 ಸಾಲಿನಲ್ಲಿ 4.03 ಲಕ್ಷ ಮೆ.ಟನ್ ಮರಳನ್ನು ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಗೆ ಪೂರೈಸಲಾಗಿರುತ್ತದೆ.<br>• ತಿದ್ದುಪಡಿ ನಿಯಮ 31-R ರಲ್ಲಿ ಸರ್ಕಾರಿ ಕಾಮಗಾರಿಗಳಿಗೆ ನದಿ ಪಾತ್ರದ ಮರಳು ಬ್ಲಾಕ್‌ಗಳನ್ನು ಮೀಸಲಿರಿಸಿ ಗುತ್ತಿಗೆ ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿರುತ್ತದೆ. ಅದರಂತೆ ರಾಜ್ಯದಲ್ಲಿ ಸರ್ಕಾರಿ ಕಾಮಗಾರಿಗಳಿಗೆ 14 ಮರಳು ಬ್ಲಾಕ್‌ಗಳಿಗೆ ಮರಳು ಗುತ್ತಿಗೆ ಮಂಜೂರು ಮಾಡಲಾಗಿರುತ್ತದೆ. ಸದರಿ ಮರಳು ಬ್ಲಾಕ್‌ಗಳಿಂದ 2017-18 ನೇ ಸಾಲಿನಲ್ಲಿ 3.22 ಲಕ್ಷ ಮೆ. ಟನ್ ಮರಳನ್ನು ಕಡಿಮೆ ವರಮಾನದ ಆಶ್ರಯ ಯೋಜನೆ ಮನೆಗಳಿಗೆ ಹಾಗೂ ಇತರೆ ಸರ್ಕಾರಿ ಕಾಮಗಾರಿಗಳಿಗೆ ಪೂರೈಸಲಾಗಿರುತ್ತದೆ.<br>• ನಿಯಮ 31-X ರಲ್ಲಿ ಈಗಾಗಲೇ ಲೋಕೋಪಯೋಗಿ ಇಲಾಖೆಯಿಂದ ಕಾರ್ಯನಿರ್ವಹಿಸುತ್ತಿರುವ ಮರಳು ಬ್ಲಾಕ್‌ಗಳ ಟೆಂಡರ್ ಅವಧಿಯು ಮುಕ್ತಾಯ ಆಗುವವರೆಗೂ ವಿಸ್ತರಿಸಲು ಅವಕಾಶ ಕಲ್ಪಿಸಲಾಗಿರುತ್ತದೆ. ಸದರಿ ಮರಳು ಬ್ಲಾಕ್‌ಗಳಲ್ಲಿ 2017-18 ಸಾಲಿನಲ್ಲಿ 7.91 ಲಕ್ಷ ಮೆ.ಟನ್ ಮರಳನ್ನು ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಪೂರೈಸಲಾಗಿರುತ್ತದೆ. |

| | | ನದಿ ಮರಳಿಗೆ ಪರ್ಯಾಯವಾಗಿ ಎಂ-ಸ್ಯಾಂಡ್ ಬಳಕೆಯನ್ನು ಉತ್ತೇಜಿಸಲು ಹಾಗೂ ಉತ್ಪಾದಿಸಲು ನಿಯಮಗಳಲ್ಲಿ ತಿದ್ದುಪಡಿಗಳನ್ನು ತರಲಾಗಿರುತ್ತದೆ. ಅದರಂತೆ ಎಂ-ಸ್ಯಾಂಡ್ ಘಟಕ ಸ್ಥಾಪಿಸುವವರಿಗೆ ಗರಿಷ್ಠ 20 ವರ್ಷದವರೆಗೆ 50-00 ಎಕರೆ ವಿಸ್ತೀರ್ಣದವರೆಗೂ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ.<br>• ಪ್ರಸ್ತುತ ಚಾಲ್ತಿ ಕ್ರಷರ್ ಘಟಕದವರು ಎಂ-ಸ್ಯಾಂಡ್ ಘಟಕಕ್ಕೆ ಪರಿವರ್ತನೆಗೊಂಡು ಎಂ-ಸ್ಯಾಂಡ್ ಉತ್ಪಾದನೆ ಪ್ರಾರಂಭಿಸಿದಲ್ಲಿ ಸದರಿಯವರು ಹೊಂದಿರುವ ಕಲ್ಲುಗಣಿ ಗುತ್ತಿಗೆಗಳ ಅವಧಿಯನ್ನು 20 ವರ್ಷಗಳಿಗೆ ವಿಸ್ತರಿಸಲು ನಿಯಮಗಳಲ್ಲಿ ಅವಕಾಶ ಕಲ್ಪಿಸಲಾಗಿದೆ.<br>• ಅದರಂತೆ ರಾಜ್ಯದಲ್ಲಿ 2017-18 ಸಾಲಿನಲ್ಲಿ ಅಂದಾಜು 23 ಮಿಲಿಯನ್ ಮೆ.ಟನ್ ಮರಳನ್ನು ಉತ್ಪಾದಿಸಿ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಪೂರೈಕೆ ಮಾಡಲಾಗಿರುತ್ತದೆ.<br>• ಅಲ್ಲದೆ ರಾಜ್ಯ ಸರ್ಕಾರವು ಮರಳಿನ ಕೊರತೆಯನ್ನು ಪೂರೈಸಲು ಹಾಗೂ ಕಡಿಮೆ ದರದಲ್ಲಿ ಸಾರ್ವಜನಿಕರಿಗೆ ಮರಳು ಲಭ್ಯವಾಗುವಂತೆ ಮಾಡಲು ವಿದೇಶದಿಂದ ಮರಳನ್ನು ಆಮದು ಮಾಡಿಕೊಳ್ಳಲು ನಿರ್ದರಿಸಿ ದಿನಾಂಕ:16.11.2017 ರಂದು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿಗಳು, 1994ಕ್ಕೆ ತಿದ್ದುಪಡಿ ತಂದಿರುತ್ತದೆ. ತಿದ್ದುಪಡಿ ನಿಯಮ 31-ZF ಮತ್ತು 31-ZG ರಲ್ಲಿ ವಿದೇಶದಿಂದ ಆಮದು ಮಾಡಿಕೊಂಡ ಮರಳನ್ನು ಸಾರ್ವಜನಿಕರಿಗೆ ವಿತರಿಸಲು ಅವಕಾಶ ಕಲ್ಪಿಸಲಾಗಿದ್ದು ಅದರಂತೆ ಇಲಾಖೆಯಿಂದ ಕ್ರಮ ಕೈಗೊಳ್ಳಲಾಗುತ್ತಿದೆ. |
|---|---|---|

ಸಂಖ್ಯೆ:ಸಿಐ 244 ಎಂಎಂಎನ್ 2018

(ರಾಜಶೇಖರ ಬಿ. ಪಾಟೀಲ)

# ಕರ್ನಾಟಕ ವಿಧಾನಸಭೆ

| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 502 |
|---|---|---|
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಎನ್.ಎ. ಹ್ಯಾರಿಸ್ (ಶಾಂತಿನಗರ) |
| 3) | ಉತ್ತರಿಸಬೇಕಾದ ದಿನಾಂಕ | 09/07/2018 |
| 4) | ಉತ್ತರಿಸುವವರು | **ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು** |

*****

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಉದ್ಯೋಗ ವಿನಿಮಯ ಕೇಂದ್ರಗಳು ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳು ಯಾವುವು? | ರಾಜ್ಯದಲ್ಲಿ ಉದ್ಯೋಗ ವಿನಿಮಯ ಕೇಂದ್ರಗಳು ಈ ಕೆಳಕಂಡ ಕಾರ್ಯಚಟುವಟಿಕೆಗಳನ್ನು ಅನುಷ್ಠಾನಗೊಳಿಸುತ್ತಿವೆ.:-<br>1) <u>ನೋಂದಣಿ – ಉದ್ಯೋಗ ಸಹಾಯ:-</u><br>ಉದ್ಯೋಗಾಕಾಂಕ್ಷಿಗಳ ನೋಂದಣಿ ಮತ್ತು ಉದ್ಯೋಗ ಪಡೆಯಲು ಸಹಾಯ ಒದಗಿಸುವುದು.<br>2) <u>ವೃತ್ತಿ ಮಾರ್ಗದರ್ಶನ:-</u><br>ಉದ್ಯೋಗಾಕಾಂಕ್ಷಿಗಳು ಮತ್ತು ವಿದ್ಯಾರ್ಥಿಗಳಿಗೆ ಅವರ ವೃತ್ತಿ ಆಯ್ಕೆಯಲ್ಲಿ ಸಹಾಯ ಮಾಡಲು ವೃತ್ತಿ ಮಾರ್ಗದರ್ಶನ ಕಾರ್ಯಕ್ರಮ ಅನುಷ್ಠಾನಗೊಳಿಸಲಾಗುತ್ತಿದೆ. ಸಹಾಯಕ ನಿರ್ದೇಶಕರು/ಉದ್ಯೋಗಾಧಿಕಾರಿಗಳು ವಿವಿಧ ಶಾಲಾಕಾಲೇಜುಗಳಿಗೆ ಭೇಟಿ ನೀಡಿ ವೃತ್ತಿ ಮಾರ್ಗದರ್ಶನ ಸೇವೆಯನ್ನು ಒದಗಿಸುತ್ತಿದ್ದಾರೆ.<br>3) <u>ಸ್ಟಡಿ ಸರ್ಕಲ್ಸ್:-</u> ಗ್ರಾಮೀಣ ವಿದ್ಯಾವಂತ ನಿರುದ್ಯೋಗಿಗಳು ನೇರ ನೇಮಕಾತಿ ಪರೀಕ್ಷೆಗಳನ್ನು ಆತ್ಮ ವಿಶ್ವಾಸದಿಂದ ಎದುರಿಸುವಂತೆ ಸಜ್ಜುಗೊಳಿಸಲು ರಾಜ್ಯದ ಎಲ್ಲಾ ಜಿಲ್ಲಾ ಉದ್ಯೋಗ ವಿನಿಮಯ ಕಚೇರಿಗಳಲ್ಲಿ 'ಸ್ಟಡಿ ಸರ್ಕಲ್ಸ್' ನಡೆಸಲಾಗುತ್ತಿದೆ. ಈ 'ಸ್ಟಡಿ ಸರ್ಕಲ್ಸ್' ಮೂಲಕ ನೇಮಕಾತಿ ಪರೀಕ್ಷೆಗಳನ್ನು ತೆಗೆದುಕೊಳ್ಳುವ ಅಭ್ಯರ್ಥಿಗಳಿಗೆ ಉಚಿತ 'ಪರೀಕ್ಷಾ ಪೂರ್ವ ತರಬೇತಿ'ಗಳನ್ನು ಆಯೋಜಿಸಲಾಗುತ್ತಿದೆ.<br>4) <u>ಉದ್ಯೋಗ ಮೇಳಗಳು:-</u> ಜಾಗತೀಕರಣ ನೀತಿಯಿಂದಾಗಿ, ಖಾಸಗಿ ಕ್ಷೇತ್ರದಲ್ಲಿ ಹೆಚ್ಚಿನ ಉದ್ಯೋಗಗಳು ಸೃಜನೆಯಾಗುತ್ತಿದ್ದು, ಈ ಉದ್ಯೋಗ ಅವಕಾಶಗಳನ್ನು ಉದ್ಯೋಗಾಕಾಂಕ್ಷಿಗಳಿಗೆ ತಲುಪಿಸಲು ಉದ್ಯೋಗ ವಿನಿಮಯ ಕಚೇರಿಗಳಲ್ಲಿ 'ಉದ್ಯೋಗ ಮೇಳ'ಗಳನ್ನು ಆಯೋಜಿಸಲಾಗುತ್ತಿದೆ. ಈ ಮೂಲಕ ಉದ್ಯೋಗಾಕಾಂಕ್ಷಿಗಳು ಮತ್ತು ನಿಯೋಜಕರನ್ನು ಒಂದೇ ವೇದಿಕೆಗೆ ತರುವ ಮೂಲಕ ನೇರವಾಗಿ ಪರಸ್ಪರ ಭೇಟಿ ಮಾಡುವ ಅವಕಾಶವನ್ನು ಒದಗಿಸಲಾಗುತ್ತಿದೆ. |

----2

| | | |
|---|---|---|
| ಆ) | ಕಳೆದ ಮೂರು ವರ್ಷಗಳಲ್ಲಿ ಎಷ್ಟು ನಿರುದ್ಯೋಗಿಗಳಿಗೆ ಉದ್ಯೋಗವಕಾಶವನ್ನು ಒದಗಿಸಿಕೊಡಲಾಗಿದೆ; (ಜಿಲ್ಲಾವಾರು ಸಂಖ್ಯಾ ವಿವರಗಳನ್ನು ನೀಡುವುದು); | ಕಳೆದ ಮೂರು ವರ್ಷಗಳಲ್ಲಿ ಉದ್ಯೋಗ ವಿನಿಮಯ ಕಚೇರಿಗಳ ಮೂಲಕ ಒಟ್ಟು 27,671 ನಿರುದ್ಯೋಗಿ ಅಭ್ಯರ್ಥಿಗಳಿಗೆ ಉದ್ಯೋಗಾವಕಾಶ ಕಲ್ಪಿಸಲಾಗಿದೆ. ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಇ) | ಡಿಪ್ಲೊಮ/ಎಂಜಿನಿಯರಿಂಗ್/ವೈದ್ಯಕೀಯ/ ಮತ್ತಿತರ ವಿವಿಧ ವರ್ಗಗಳ ಅರ್ಹರಿಗೆ ಉದ್ಯೋಗ ಮತ್ತು ತರಬೇತಿ ನೀಡುವಲ್ಲಿ ಇಲಾಖೆಯ ಕಾರ್ಯಕ್ರಮಗಳು ಮತ್ತು ಖಾಸಗಿ ವಲಯದ ಸಂಸ್ಥೆಗಳಲ್ಲಿ ಉದ್ಯೋಗ ದೊರಕಿಸುವಲ್ಲಿ ಇಲಾಖೆ ಅನುಸರಿಸುತ್ತಿರುವ ಕಾರ್ಯಕ್ರಮಗಳು ಯಾವುವು; | ಖಾಸಗಿ ಕ್ಷೇತ್ರದಲ್ಲಿನ ವಿಪುಲ ಉದ್ಯೋಗಾವಕಾಶಗಳನ್ನು ಉದ್ಯೋಗಾಕಾಂಕ್ಷಿಗಳಿಗೆ ತಲುಪಿಸಲು 'ಉದ್ಯೋಗ ಮೇಳ'ಗಳನ್ನು ಆಯೋಜಿಸಲಾಗುತ್ತಿದೆ. |
| ಈ) | ಉದ್ಯೋಗ ವಿನಿಮಯ ಕೇಂದ್ರಗಳನ್ನು ಇನ್ನಷ್ಟು ಬಲಪಡಿಸುವ ಮತ್ತು ಹೆಚ್ಚಿನ ಉದ್ಯೋಗಗಳನ್ನು ದೊರಕಿಸಿಕೊಡುವಲ್ಲಿ ಇಲಾಖೆಯ ಮುಂದಿರುವ ಪ್ರಸ್ತಾವನೆಗಳು ಯಾವುವು? | ಉದ್ಯೋಗ ವಿನಿಮಯ ಕೇಂದ್ರಗಳನ್ನು ಇತ್ತೀಚಿನ ಬೆಳವಣಿಗೆಗಳ ಅನುಗುಣವಾಗಿ ಸಿದ್ಧಪಡಿಸಲು ಆಧುನೀಕರಣಗೊಳಿಸಿ ಪರಿಣಾಮಕಾರಿ ಸೇವೆಗಳನ್ನು ಒದಗಿಸಲು ಬಲಪಡಿಸಲಾಗುತ್ತಿದೆ.<br><br>UNDP ಸಹಾಯದೊಂದಿಗೆ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ 'YES' (Youth Employability Service Centre) ಸೆಂಟರ್‌ಗಳನ್ನು ನೆಲೆಗೊಳಿಸಲು ಯೋಜಿಸಿದ್ದು, ಅವುಗಳ ಮೂಲಕ ಯುವಜನತೆಗೆ ನೋಂದಣಿ, ಅಸೆಸ್‌ಮೆಂಟ್ ತರಬೇತಿ ಮತ್ತು ಉದ್ಯೋಗ ಮೇಳ ಮುಂತಾದ ಮೌಲ್ಯವರ್ಧಿತ ಸೇವೆಗಳನ್ನು ಒದಗಿಸಲು ಯೋಜಿಸಿದೆ. |

**ಸಂಖ್ಯೆ: ಕೌಉಜೀಇ 43 ಕೈತಪ್ರ 2018**

ಆರ್.ವಿ. ದೇಶಪಾಂಡೆ
ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

ಅನುಬಂಧ

ಕಳೆದ 3 ವರ್ಷಗಳಲ್ಲಿ ರಾಜ್ಯದ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರಗಳಿಂದ ಉದ್ಯೋಗ ಪಡೆದವರ ಸಂಖ್ಯೆ

| ಕ್ರ.ಸಂ. | ಜಿಲ್ಲೆ | 2015–16 | 2016–17 | 2017–18 | ಒಟ್ಟು |
|---|---|---|---|---|---|
| 1 | ಬೆಂಗಳೂರು ನಗರ ಮತ್ತು ಗ್ರಾಮಾಂತರ | 836 | 1280 | 1690 | 3806 |
| 2 | ಬಾಗಲಕೋಟೆ. | 152 | 24 | 614 | 790 |
| 3 | ಬೆಳಗಾವಿ. | 68 | 364 | 627 | 1059 |
| 4 | ಬಳ್ಳಾರಿ. | 135 | 553 | 737 | 1425 |
| 5 | ಬೀದರ್. | 9 | 48 | 199 | 256 |
| 6 | ಬಿಜಾಪುರ. | 211 | 139 | 164 | 514 |
| 7 | ಚಾಮರಾಜನಗರ. | 81 | 176 | 279 | 536 |
| 8 | ಚಿಕ್ಕಬಳ್ಳಾಪುರ. | 20 | 48 | 231 | 299 |
| 9 | ಚಿಕ್ಕಮಗಳೂರು. | 73 | 16 | 173 | 262 |
| 10 | ಚಿತ್ರದುರ್ಗ. | 73 | 82 | 1083 | 1238 |
| 11 | ದಾವಣಗೆರೆ. | 64 | 204 | 695 | 963 |
| 12 | ಗದ್ಗಗ. | 78 | 29 | 448 | 555 |
| 13 | ಕಲಬುರಗಿ | 134 | 237 | 408 | 779 |
| 14 | ಹಾಸನ. | 107 | 91 | 478 | 676 |
| 15 | ಹಾವೇರಿ. | 27 | 453 | 681 | 1161 |
| 16 | ಹುಬ್ಬಳ್ಳಿ. | 1794 | 2991 | 1169 | 5954 |
| 17 | ಕೋಲಾರ. | 204 | 48 | 306 | 558 |
| 18 | ಕೊಪ್ಪಳ. | 30 | 11 | 331 | 372 |
| 19 | ಮಡಿಕೇರಿ. | 22 | 0 | 137 | 159 |
| 20 | ಮಂಡ್ಯ. | 69 | 365 | 325 | 759 |
| 21 | ಮಂಗಳೂರು. | 2 | 8 | 93 | 103 |
| 22 | ಮೈಸೂರು. | 233 | 156 | 553 | 942 |
| 23 | ರಾಮನಗರ. | 47 | 154 | 392 | 593 |
| 24 | ರಾಯಚೂರು. | 222 | 224 | 384 | 830 |
| 25 | ಶಿವಮೊಗ್ಗ. | 187 | 217 | 550 | 954 |
| 26 | ತುಮಕೂರು. | 131 | 177 | 666 | 974 |
| 27 | ಉಡುಪಿ | 51 | 62 | 167 | 280 |
| 28 | ಕಾರವಾರ. | 20 | 0 | 517 | 537 |
| 29 | ಯಾದಗಿರಿ. | 21 | 31 | 285 | 337 |
|  | ಒಟ್ಟು:- | 5101 | 8188 | 14382 | 27671 |

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 534 |
| ಸದಸ್ಯರ ಹೆಸರು : | ಶ್ರೀ ನೆಹರು ಓಲೇಕಾರ್ (ಹಾವೇರಿ) |
| ಉತ್ತರಿಸಬೇಕಾದ ದಿನಾಂಕ: | 09.07.2018 |
| ಉತ್ತರಿಸುವ ಸಚಿವರು : | ಮಾನ್ಯ ಗಣಿ ಮತ್ತು ಭೂವಿಜ್ಞಾನ ಹಾಗೂ ಮುಜರಾಯಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಅನೇಕ ನದಿ ತೀರಗಳಲ್ಲಿ ಅನಧಿಕೃತವಾಗಿ ಮರಳು ತುಂಬಿ ಸಾಗಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಹಿಂದಿನ ಸರ್ಕಾರದ ಅವಧಿಯಲ್ಲಿ ಟೆಂಡರ್ ಮೂಲಕ ಹರಾಜು ಮಾಡಿದ್ದು, ಇದರಿಂದ ಸರ್ಕಾರಕ್ಕೆ ಬಂದ ರಾಜಸ್ವ ಹಣ ಎಷ್ಟು; ಹಾವೇರಿ ಜಿಲ್ಲೆಯಿಂದ ಬಂದ ರಾಜಸ್ವ ಹಣ ಎಷ್ಟು; (ವಿವರ ಒದಗಿಸುವುದು) | **2017-18** ನೇ ಸಾಲಿನಲ್ಲಿ ರಾಜ್ಯದಲ್ಲಿ ಹರಾಜು ಮೂಲಕ ಮಂಜೂರಾದ ಮರಳು ಗುತ್ತಿಗೆಗಳ ಪ್ರದೇಶದಲ್ಲಿ ಮರಳು ಗಣಿಗಾರಿಕೆಯಿಂದ ರೂ **274.54 ಲಕ್ಷ ರಾಜಧನ**, ರೂ. **3405.57 ಲಕ್ಷ ಹೆಚ್ಚುವರಿ ನಿಯತಕಾಲಿಕ ಮೊತ್ತ** ಹಾಗೂ **30.95 ಲಕ್ಷ ಜಿಲ್ಲಾ ಖನಿಜ ಪ್ರತಿಷ್ಠಾನ** ನಿಧಿ ಸೇರಿದಂತೆ **ಒಟ್ಟು ರೂ.3711.06 ಲಕ್ಷ** ಮೊತ್ತವನ್ನು ಸಂಗ್ರಹಿಸಲಾಗಿರುತ್ತದೆ.<br><br>ಹಾವೇರಿ ಜಿಲ್ಲಾ ವ್ಯಾಪ್ತಿಯ ತುಂಗಭದ್ರಾ ನದಿ ವ್ಯಾಪ್ತಿಯಲ್ಲಿ 11 ಮರಳು ಬ್ಲಾಕ್‌ಗಳನ್ನು ಟೆಂರ್-ಕಂ-ಇ-ಹರಾಜು ಮೂಲಕ ಯಶಸ್ವಿ ಬಿಡ್‌ದಾರರಿಗೆ ಮರಳು ಗುತ್ತಿಗೆಗಳನ್ನು ಮಂಜೂರು ಮಾಡಲಾಗಿದ್ದು, ಗಣಿಗುತ್ತಿಗೆ ಮಂಜೂರಾದ ದಿನಾಂಕದಿಂದ ಇಲ್ಲಿವರೆಗೆ **20600 ಮೆ.ಟನ್** ಮರಳನ್ನು ಗಣಿಗಾರಿಕೆ ನಡೆಸಿ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಪೂರೈಸಿ **ರೂ.12.36 ಲಕ್ಷ ರಾಜಧನ, ರೂ.191.19 ಲಕ್ಷ ಹೆಚ್ಚುವರಿ ನಿಯತಕಾಲಿಕ ಮೊತ್ತ** ಹಾಗೂ **1.23 ಲಕ್ಷ ಜಿಲ್ಲಾ ಖನಿಜ ಪ್ರತಿಷ್ಠಾನ** ನಿಧಿ ಸೇರಿದಂತೆ **ಒಟ್ಟು ರೂ.204.79 ಲಕ್ಷ** ಮೊತ್ತವನ್ನು ಸಂಗ್ರಹಿಸಲಾಗಿರುತ್ತದೆ. |
| ಇ) | ಹಾವೇರಿ ಜಿಲ್ಲೆ ರಾಣೆ ಬೆನ್ನೂರು ತಾಲ್ಲೂಕು ನಿರ್ಮಿತ ಕೇಂದ್ರದಿಂದ ಮರಳು ಸಾಗಿಸಿ ಬಂದಿರುವ ರಾಜಸ್ವ ಹಣ ಎಷ್ಟು; | ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕು ವ್ಯಾಪ್ತಿಯ ತುಂಗಭದ್ರ ನದಿ ಪಾತ್ರದ ಬೇಲೂರು ಹಾಗೂ ಮುದೇನೂರು ಗ್ರಾಮ ವ್ಯಾಪ್ತಿಯಲ್ಲಿ 2 ಮರಳು ಬ್ಲಾಕ್‌ಗಳನ್ನು ಮರಳು ಗಣಿಗಾರಿಕೆಗಾಗಿ ಜಿಲ್ಲಾ ನಿರ್ಮಿತಿ ಕೇಂದ್ರಕ್ಕೆ ಮಂಜೂರು ಮಾಡಲಾಗಿರುತ್ತದೆ. ಸದರಿ ಮರಳು ಬ್ಲಾಕ್‌ಗಳಿಂದ ಒಟ್ಟು **1,22,000** ಮೆ. ಟನ್ ಮರಳು ಗಣಿಗಾರಿಕೆ ನಡೆಸಿ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ವಿತರಣೆ ಮಾಡಿ ರೂ.**73.20** ಲಕ್ಷ ರಾಜಧನ **ರೂ.488.00** ಲಕ್ಷ ಹೆಚ್ಚುವರಿ ನಿಯತಕಾಲಿಕ ಮೊತ್ತ ಹಾಗೂ **ರೂ. 7.32** ಜಿಲ್ಲಾ ಖನಿಜ ಪ್ರತಿಷ್ಠಾನ ನಿಧಿ ಸೇರಿದಂತೆ ಒಟ್ಟು ರೂ. **568.52** ಲಕ್ಷ ಸಂಗ್ರಹವಾಗಿರುತ್ತದೆ. |

<table>
<tr>
<td>ಈ)</td>
<td>ಅನಧಿಕೃತವಾಗಿ ಮರಳು ಸಾಗಾಣಿಕೆ ಮಾಡುತ್ತಿರುವವರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ?</td>
<td>
ಅನಧಿಕೃತ ಮರಳು ಗಣಿಗಾರಿಕೆ/ಸಾಗಾಣಿಕೆ ಸಂಬಂಧಿಸಿದಂತೆ ಜಿಲ್ಲಾ ಹಾಗೂ ತಾಲ್ಲೂಕು ಮರಳು ಸಮಿತಿ ಸದಸ್ಯ ಇಲಾಖೆ ಅಧಿಕಾರಿಗಳಿಂದ ನಿಯಮಾನುಸಾರ ಕಾನೂನು ಕ್ರಮ ಕೈಗೊಳ್ಳಲಾಗುತ್ತಿದೆ.<br><br>
ಅದರಂತೆ, ಜಿಲ್ಲೆಯಲ್ಲಿ 2016-17 ನೇ ಸಾಲಿನಿಂದ 2018-19 ಸಾಲಿನ ಜೂನ್ ಅಂತ್ಯದವರೆಗೆ ಅನಧಿಕೃತ ಮರಳು ಗಣಿಗಾರಿಕೆ / ಸಾಗಾಣಿಕೆಗಾಗಿ ಸಂಬಂಧಪಟ್ಟ ಪೊಲೀಸ್ ಠಾಣೆ ಹಾಗೂ ನ್ಯಾಯಾಲಯಗಳಲ್ಲಿ ಮೊಕದ್ದಮೆಗಳನ್ನು ದಾಖಲಿಸಲಾಗಿದ್ದು, ವಿವರಗಳು ಈ ಕೆಳಕಂಡಂತಿರುತ್ತದೆ.
<table>
<tr><th>ಕ್ರಸಂ</th><th>ವರ್ಷ</th><th>ಅನಧಿಕೃತ ಮರಳು ಗಣಿಗಾರಿಕೆ/ ಸಾಗಾಣಿಕೆ ಅಡಿಯಲ್ಲಿ ದಾಖಲಿಸಿರುವ ಮೊಕದ್ದಮೆಗಳ ಸಂಖ್ಯೆ</th></tr>
<tr><td>1.</td><td>2016-17</td><td>135</td></tr>
<tr><td>2.</td><td>2017-18</td><td>105</td></tr>
<tr><td>3.</td><td>2018-19</td><td>11</td></tr>
<tr><td colspan="2">ಒಟ್ಟು</td><td>251</td></tr>
</table>
ಅಲ್ಲದೆ, 2017-18 ಸಾಲಿನಿಂದ 2018-19ನೇ ಸಾಲಿನ ಜೂನ್ ಅಂತ್ಯದವರೆಗೆ ಅನಧಿಕೃತವಾಗಿ ದಾಸ್ತಾನಿರಿಸಿದ್ದ, ಅಂದಾಜು **2248** ಕ್ಯೂಮಿ ಮರಳನ್ನು ವಶಪಡಿಸಿಕೊಂಡು ನಿಯಮಾನುಸಾರ ವಿಲೇವಾರಿ ಮಾಡಿ ರೂ. **20.23** ಲಕ್ಷ ರಾಜಧನವನ್ನು ಸಂಗ್ರಹಣೆ ಮಾಡಿ ಸರ್ಕಾರಕ್ಕೆ ಜಮೆ ಮಾಡಲಾಗಿರುತ್ತದೆ.
</td>
</tr>
</table>

ಸಂಪ್ರ:ಸಿಇ 252 ಎಂಎಂಎನ್ 2018

(ರಾಜಶೇಖರ ಬಿ. ಪಾಟೀಲ)
ಗಣಿ ಮತ್ತು ಭೂ ವಿಜ್ಞಾನ ಹಾಗೂ ಮುಜರಾಯಿ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 02 |
| ಸದಸ್ಯರ ಹೆಸರು | ಮಾನ್ಯ ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. |
| ಉತ್ತರಿಸುವ ದಿನಾಂಕ: | 09.07.2018 |
| ಉತ್ತರಿಸುವ ಸಚಿವರು: | ಮಾನ್ಯ ಗಣಿ ಮತ್ತು ಭೂವಿಜ್ಞಾನ ಹಾಗೂ ಮುಜರಾಯಿ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಮುಜರಾಯಿ ಇಲಾಖೆಗೆ ಸೇರಿದ ದೇವಸ್ಥಾನಗಳು ಯಾವುವು? (ಕ್ಷೇತ್ರವಾರು ವಿವರ ನೀಡುವುದು) | ರಾಜ್ಯದಲ್ಲಿ ಮುಜರಾಯಿ ಇಲಾಖೆಗೆ ಸೇರಿದ ಒಟ್ಟು 34,556 ದೇವಸ್ಥಾನಗಳು ಇರುತ್ತದೆ.<br><br>(ಜಿಲ್ಲಾವಾರು/ತಾಲ್ಲೂಕುವಾರು, ದೇವಸ್ಥಾನಗಳ ವಿವರವನ್ನು ಅನುಬಂಧದಲ್ಲಿ ಒದಗಿಸಿದೆ) |
| ಆ | ಕಳೆದ ಮೂರು ವರ್ಷಗಳಲ್ಲಿ ಕೊಡಗು ಜಿಲ್ಲೆಯಲ್ಲಿರುವ ದೇವಸ್ಥಾನಗಳ ಜೀರ್ಣೋದ್ಧಾರಕ್ಕಾಗಿ ಎಷ್ಟು ಅನುದಾನ ಬಿಡುಗಡೆಗೊಳಿಸಲಾಗಿದೆ; (ಕ್ಷೇತ್ರವಾರು ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಕೊಡಗು ಜಿಲ್ಲೆಯಲ್ಲಿರುವ ದೇವಸ್ಥಾನಗಳ ಜೀರ್ಣೋದ್ಧಾರಕ್ಕಾಗಿ ಒಟ್ಟು ರೂ.360.56ಲಕ್ಷಗಳ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ.<br>ಕ್ಷೇತ್ರವಾರು ವಿವರ ಕೆಳಕಂಡಂತಿದೆ. |

ರೂ.ಲಕ್ಷಗಳಲ್ಲಿ

| ಯೋಜನೆ/ಕ್ಷೇತ್ರ | ಮಡಕೇರಿ | | | ವಿರಾಜಪೇಟೆ | | |
|---|---|---|---|---|---|---|
| | 2015-16 | 2016-17 | 2017-18 | 2015-16 | 2016-17 | 2017-18 |
| ದುರಸ್ಥಿ/ಜೀರ್ಣೋದ್ಧಾರ/ಅಭಿವೃದ್ಧಿ | 35.00 | 30.00 | 37.00 | 17.00 | 50.00 | 99.00 |
| ಆರಾಧನಾ | 0.17 | 0.70 | 0.89 | 0.17 | 0.70 | 0.89 |
| ಪರಿಶಿಷ್ಟ ಜಾತಿ ಉಪಯೋಜನೆ | 9.99 | 8.55 | 8.92 | 9.99 | 8.55 | 8.92 |
| ಗಿರಿಜನ ಉಪಯೋಜನೆ | 1.42 | 0.80 | 1.34 | 1.42 | 0.80 | 1.34 |
| ಸಾಮಾನ್ಯ ಸಂಗ್ರಹಣಾ ನಿಧಿ | 0.00 | 0.00 | 4.00 | 6.00 | 12.00 | 5.00 |
| **ಒಟ್ಟು** | **46.58** | **40.05** | **52.15** | **34.58** | **72.05** | **115.15** |

(ರಾಜಶೇಖರ ಬಿ. ಪಾಟೀಲ)

# ಅನುಬಂಧ
## ಧಾರ್ಮಿಕ ದತ್ತಿ ಇಲಾಖೆಯ ಅಧಿಸೂಚಿತ ಸಂಸ್ಥೆಗಳ ಜಿಲ್ಲಾವಾರು-ತಾಲ್ಲೂಕುವಾರು ಅಂಕಿ ಅಂಶಗಳ ವಿವರ

| ಕ್ರ. ಸಂ | ಜಿಲ್ಲೆ | ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿರುವ ದೇವಾಲಯಗಳ ಸಂಖ್ಯೆ | ಸೇರ್ಪಡೆಯಾಗಿರುವ ದೇವಾಲಯಗಳ ಸಂಖ್ಯೆ | ಹೊರತು ಪಡಿಸಿರುವ ದೇವಾಲಯಗಳ ಸಂಖ್ಯೆ | ಪ್ರಸ್ತುತ ದೇವಾಲಯಗಳ ಸಂಖ್ಯೆ |
|---|---|---|---|---|---|
| 1 | 2 | 3 | 4 | 5 | 6 |
| 1 | ಬೆಂಗಳೂರು ನಗರ ಜಿಲ್ಲೆ : | | | | |
| 1 | ಕಾರ್ಪೋರೇಷನ್ ವಲಯ | 68 | 0 | 1 | 67 |
| 2 | ಬೆಂಗಳೂರು ಉತ್ತರ ತಾಲ್ಲೂಕು | 152 | 3 | 0 | 155 |
| 3 | ಬೆಂಗಳೂರು ಉತ್ತರ (ಅಪರ) ತಾಲ್ಲೂಕು | 167 | 32 | 0 | 199 |
| 4 | ಬೆಂಗಳೂರು ದಕ್ಷಿಣ ತಾಲ್ಲೂಕು | 193 | 41 | 0 | 234 |
| 5 | ಬೆಂಗಳೂರು ದಕ್ಷಿಣ (ಅಪರ) ತಾಲ್ಲೂಕು | 145 | 9 | 0 | 154 |
| 6 | ಆನೇಕಲ್ ತಾಲ್ಲೂಕು | 291 | 0 | 0 | 291 |
| | ಒಟ್ಟು | 1016 | 85 | 1 | 1100 |
| 2 | ಬೆಂಗಳೂರು ಗ್ರಾಮಾಂತರ ಜಿಲ್ಲೆ : | | | | |
| 1 | ನೆಲಮಂಗಲ ತಾಲ್ಲೂಕು | 285 | 44 | 1 | 328 |
| 2 | ಹೊಸಕೋಟೆ ತಾಲ್ಲೂಕು | 287 | 1 | 4 | 284 |
| 3 | ದೇವನಹಳ್ಳಿ ತಾಲ್ಲೂಕು | 234 | 2 | 0 | 236 |
| 4 | ದೊಡ್ಡಬಳ್ಳಾಪುರ ತಾಲ್ಲೂಕು | 270 | 19 | 0 | 289 |
| | ಒಟ್ಟು | 1076 | 66 | 5 | 1137 |
| 3 | ಬಾಗಲಕೋಟೆ | | | | |
| 1 | ಬಾಗಲ ಕೋಟೆ | 191 | 0 | 1 | 190 |
| 2 | ಬಾದಾಮಿ ತಾಲ್ಲೂಕು | 171 | 0 | 0 | 171 |
| 3 | ಬೀಳಗಿ ತಾಲ್ಲೂಕು | 112 | 0 | 0 | 112 |
| 4 | ಜಮಖಂಡಿ ತಾಲ್ಲೂಕು | 344 | 0 | 0 | 344 |
| 5 | ಮುದೋಳ ತಾಲ್ಲೂಕು | 164 | 0 | 0 | 164 |
| 6 | ಹುನಗುಂದ ತಾಲ್ಲೂಕು | 185 | 0 | 0 | 185 |
| | ಒಟ್ಟು | 1167 | 0 | 1 | 1166 |
| 4 | ಬಳ್ಳಾರಿ ಜಿಲ್ಲೆ | | | | |
| 1 | ಶಿರಗುಪ್ಪ ಜಿಲ್ಲೆ | 211 | 0 | 0 | 211 |
| 2 | ಹೊಸಪೇಟೆ ತಾಲ್ಲೂಕು | 204 | 0 | 0 | 204 |
| 3 | ಕುಡ್ಲಿಗಿ ತಾಲ್ಲೂಕು | 204 | 0 | 0 | 204 |
| 4 | ಹೂವಿನ ಹಡಗಲಿ ತಾಲ್ಲೂಕು | 92 | 1 | 0 | 93 |
| 5 | ಹಗರಿ ಬೊಮ್ಮನಹಳ್ಳಿ ತಾಲ್ಲೂಕು | 133 | 0 | 0 | 133 |
| 6 | ಸಂಡೂರು ತಾಲ್ಲೂಕು | 83 | 1 | 0 | 84 |

..೨

